ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹ ಮಾಲಿಕೆ

# ಎಸ್. ನಿಜಲಿಂಗಪ್ಪ

ನಿರೂಪಣೆ:
ಡಾ|| ಸಂದೀಪ್ ಶಾಸ್ತ್ರಿ

ಪ್ರಕಟಣೆ:
ಕರ್ನಾಟಕ ವಿಧಾನಸಭೆ ಸಚಿವಾಲಯ,
ವಿಧಾನಸೌಧ, ಬೆಂಗಳೂರು - 560 001.

*ಪ್ರತಿಭಾವಂತ ಸಂಸದೀಯ ಪಟುಗಳ*
*ಬದುಕು ಬರಹ ಮಾಲಿಕೆ*

# ಎಸ್.ನಿಜಲಿಂಗಪ್ಪ

**Eminent Parlimentarian Series**

# S. NIJALINGAPPA



ಮೊದಲ ಮುದ್ರಣ:
ಮಾರ್ಚ್, 1999 - 1,500 ಪ್ರತಿಗಳು

ಪ್ರಕಟಣೆ:
ಕರ್ನಾಟಕ ವಿಧಾನಸಭೆ ಸಚಿವಾಲಯ ವಿಧಾನಸೌಧ,
ಬೆಂಗಳೂರು - 560 001.

# ಮುನ್ನುಡಿ

ರಾಜ್ಯದ ಹಿರಿಯ ಸಂಸದೀಯ ಪಟುಗಳ ಕುರಿತು ಕಿರುಹೊತ್ತಿಗೆಗಳ ಮಾಲಿಕೆಯಡಿಯಲ್ಲಿ ಈ ಹಿಂದೆ ಶ್ರೀ ಕೆ. ಹನುಮಂತಯ್ಯ ನವರು ಕಿರುಹೊತ್ತಿಗೆಯನ್ನು ಹೊರತರಲಾಗಿದೆ. ಈಗ ಶ್ರೀ ಎಸ್. ನಿಜಲಿಂಗಪ್ಪ ಅವರ ಬಗ್ಗೆ ರಚಿತವಾಗಿರುವ ಕಿರುಹೊತ್ತಿಗೆ ಎರಡನೆಯದಾಗಿದೆ. ಈ ಕಿರುಹೊತ್ತಿಗೆಯಲ್ಲಿ ಶ್ರೀ ಎಸ್. ನಿಜಲಿಂಗಪ್ಪನವರು ಸಂಸತ್ತಿನ ಮತ್ತು ರಾಜ್ಯದ ಉಭಯ ಸದನಗಳ ಚರ್ಚೆಯಲ್ಲಿ ಭಾಗವಹಿಸಿ ಪ್ರತಿವಾದಿಸಿರುವ ಪ್ರಮುಖ ವಿಚಾರಗಳನ್ನು ಇಲ್ಲಿ ಸೇರಿಸಲಾಗಿದೆ. ಈ ಕಿರುಹೊತ್ತಿಗೆಯನ್ನು ಅಂತಿಮ ಮುದ್ರಣ ಕಾರ್ಯ ಕೈಗೊಳ್ಳುವ ಮುನ್ನ ಗ್ರಂಥಾಲಯ ಉಪ ಸಮಿತಿಯ ಅಧ್ಯಕ್ಷರಾದ ಶ್ರೀ ಬಿ.ಬಿ. ಶಿವಪ್ಪ ಅವರ ಅಧ್ಯಕ್ಷತೆಯಲ್ಲಿ ಸಮಿತಿಯು ಮಾನ್ಯ ಶ್ರೀ ಎಸ್. ನಿಜಲಿಂಗಪ್ಪ ಅವರನ್ನು ದಿನಾಂಕ 12-2-1999 ರಂದು ಅವರ ಸ್ವಗೃಹದಲ್ಲಿ (ಚಿತ್ರದುರ್ಗ) ಭೇಟಿ ಮಾಡಿ, ಈ ಕಿರುಹೊತ್ತಿಗೆಯ ಬಗ್ಗೆ ಚರ್ಚಿಸಿತು. ರಾಜ್ಯದ ಮತ್ತು ರಾಷ್ಟ್ರದ ರಾಜಕೀಯದಲ್ಲಿ ಉತ್ತುಂಗಕ್ಕೇರಿದ್ದ ಶ್ರೀಯುತರನ್ನು ಕುರಿತು ರಚಿತವಾಗಿರುವ ಈ ಕಿರುಹೊತ್ತಿಗೆಯನ್ನು ನಿರೂಪಿಸಿರುವ ಬೆಂಗಳೂರು ವಿಶ್ವವಿದ್ಯಾಲಯದ ಹಿರಿಯ ಪ್ರಾಧ್ಯಾಪಕ ಡಾ : ಸಂದೀಪ್ ಶಾಸ್ತ್ರಿಯವರಿಗೂ ಮತ್ತು ಅಚ್ಚಿಸಿದ ಸರ್ಕಾರಿ ಮುದ್ರಣಾಲಯದ ನಿರ್ದೇಶಕರಿಗೂ ಈ ಮೂಲಕ ಧನ್ಯವಾದಗಳನ್ನು ಅರ್ಪಿಸುತ್ತೇವೆ.

ಯಾಕೂಬ್ ಷರೀಫ್
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ ಸಚಿವಾಲಯ

ಬೆಂಗಳೂರು
ಮಾರ್ಚ್, 1999

# ಪೀಠಿಕೆ

ಭಾರತದೇಶ ಸ್ವಾತಂತ್ರ್ಯ ಸುವರ್ಣ ಮಹೋತ್ಸವವನ್ನು ಆಚರಿಸುತ್ತಿರುವ ಈ ಸಂದರ್ಭದಲ್ಲಿ ದೇಶಕ್ಕಾಗಿ ದುಡಿದು ಸಂಸದೀಯ ಪಟುಗಳಾಗಿ ಮಹತ್ವದ ಕೊಡುಗೆಯನ್ನು ನೀಡಿದಂತಹ ರಾಜ್ಯದ ಹಿರಿಯ ಸಂಸದೀಯ ಪಟುಗಳ ಬಗ್ಗೆ ರಾಜ್ಯದ ಜನತೆ ಮತ್ತು ರಿಧಾನ ಮಂಡಲದ ಸದಸ್ಯರುಗಳಿಗೆ ಪರಿಚಯ ಮಾಡಿಕೊಡುವ ಉದ್ದೇಶದಿಂದ ಗ್ರಂಥಾಲಯ ಉಪ ಸಮಿತಿಗೆ ವಿಧಾನ ಸಭೆಯ ಸದಸ್ಯರಾದ ಶ್ರೀ ಬಿ.ಬಿ. ಶಿವಪ್ಪನವರ ಅಧ್ಯಕ್ಷತೆಯಲ್ಲಿ ಸಮಿತಿಯನ್ನು ರಚಿಸಿ ಅವರಿಗೆ ಈ ಕಾರ್ಯವನ್ನು ವಹಿಸಲಾಯಿತು.

ಈ ಪ್ರತಿಭಾವಂತ ಸಂಸದೀಯ ಪಟುಗಳ ಮಾಲಿಕೆಯಲ್ಲಿನ ಮೊದಲನೆಯ ಕಿರುಹೊತ್ತಿಗೆ ರಾಜ್ಯದ ಮಾಜಿ ಮುಖ್ಯಮಂತ್ರಿ ಶ್ರೀ ಕೆಂಗಲ್ ಹನುಮಂತಯ್ಯ ಅವರದ್ದಾಗಿರುತ್ತದೆ. ಈ ಸಾಲಿನಲ್ಲಿ ರಾಜ್ಯದ ಮತ್ತೊರ್ವ ಹಿರಿಯ ಸ್ವಾತಂತ್ರ್ಯ ಹೋರಾಟಗಾರರೂ ಮತ್ತು ರಾಜ್ಯದ ಮುಖ್ಯಮಂತ್ರಿಗಳಾಗಿ ಸೇವೆ ಸಲ್ಲಿಸಿದ ಚೈತನ್ಯಶೀಲರಾಗಿ ಕಾರ್ಯಶೀಲರಾಗಿರುವ ಶ್ರೀ ಎಸ್. ನಿಜಲಿಂಗಪ್ಪ ನವರ ಬಗೆಗಿನ ಕಿರುಹೊತ್ತಿಗೆಯನ್ನು ಹೊರತರಲಾಗುತ್ತಿದೆ.

ಪ್ರತಿಭಾವಂತ ಸಂಸದೀಯ ಪಟುಗಳ ಬಗೆಗಿನ ಈ ಕಿರುಹೊತ್ತಿಗೆಗಳು ಮಾನ್ಯ ಸದಸ್ಯರುಗಳಿಗೆ, ಸಂಶೋಧಕರಿಗೆ ಹಾಗೂ ಸಾಮಾನ್ಯ ಓದುಗರಿಗೆ ಸಂಸದೀಯ ವಿಷಯಗಳಲ್ಲಿ ಉಪಯುಕ್ತವಾಗುತ್ತವೆಂದು ಭಾವಿಸುತ್ತೇವೆ.

ಡಿ.ಬಿ. ಕಲ್ಮಣ್‌ಕರ್
ಸಭಾಪತಿ
ವಿಧಾನ ಪರಿಷತ್ತು

ರಮೇಶ್ ಕುಮಾರ್
ಅಧ್ಯಕ್ಷ
ವಿಧಾನ ಸಭೆ

# ಪ್ರಸ್ತಾವನೆ

ಶ್ರೀ ಎಸ್. ನಿಜಲಿಂಗಪ್ಪನವರು ಲೋಕಸಭೆ, ಮೈಸೂರು ವಿಧಾನ ಸಭೆ ಮತ್ತು ಮೈಸೂರು ವಿಧಾನ ಪರಿಷತ್ತಿನಲ್ಲಿ ಮಾಡಿದ ಭಾಷಣಗಳು ಮತ್ತು ಅವರ ಸಂಕ್ಷಿಪ್ತ ಜೀವನ ಚಿತ್ರಣವನ್ನು ಸಂಕಲಿಸಿ ಕೊಡುವ ಜವಬ್ದಾರಿಯನ್ನು ನನಗೆ ವಹಿಸಿಕೊಟ್ಟಿರುವುದು ಬಹು ದೊಡ್ಡ ಮನ್ನಣೆ ಎಂದು ನಾನು ಭಾವಿಸುತ್ತೇನೆ.

ನನಗೆ ಈ ಸದಾವಕಾಶ ಒದಗಿಸಲು ಕಾರಣರಾದ ಕರ್ನಾಟಕ ವಿಧಾನ ಮಂಡಲದ ಗ್ರಂಥಾಲಯ ಸಮಿತಿಯ ಗೌರವಾನ್ವಿತ ಸದಸ್ಯರುಗಳಿಗೆ ನನ್ನ ಧನ್ಯವಾದಗಳು. ಈ ದಿಸೆಯಲ್ಲಿ ಕರ್ನಾಟಕ ಶಾಸನ ಸಭೆ ಹಾಗೂ ಸಚಿವಾಲಯದ ಅಧಿಕಾರಿಗಳು ಮತ್ತು ಸಿಬ್ಬಂದಿ ವರ್ಗದವರು ನೀಡಿದ ಅಮೂಲ್ಯ ಸಹಕಾರ ಮತ್ತು ನೆರವಿಗಾಗಿ ನನ್ನ ವಂದನೆಗಲನ್ನು ಸಲ್ಲಿಸುತ್ತೇನೆ. ಡಾ: ಪಿ. ರಾಮಣ್ಣ, ಉಪನ್ಯಾಸಕರು, ರಾಜ್ಯಶಾಸ್ತ್ರ ವಿಭಾಗ, ಬೆಂಗಳೂರು ವಿಶ್ವವಿದ್ಯಾಲಯ, ಇವರು ಶ್ರೀ ಎಸ್. ನಿಜಲಿಂಗಪ್ಪನವರು ಮಾಡಿದ ಭಾಷಣಗಳನ್ನು ಸಂಗ್ರಹಿಸಿ ಕೊಡುವಲ್ಲಿ ಸಹಕರಿಸಿದ್ದಕ್ಕಾಗಿ ಅವರಿಗೆ ನನ್ನ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ. ಶ್ರೀ ಸುರೇಶ್ ಕುಮಾರ್, ರಾಜ್ಯಶಾಸ್ತ್ರ, ಉಪನ್ಯಾಸಕರು, ಸರ್ಕಾರಿ ಪದವಿಪೂರ್ವ ಕಾಲೇಜು, ಶ್ರೀನಿವಾಸಪುರ, ಇವರು ಇಂಗ್ಲೀಷ್ ಸಾಮಾಗ್ರಿಯನ್ನು ಕನ್ನಡಕ್ಕೆ ಅನುವಾದ ಮಾಡಿ ಉತ್ಕೃಷ್ಟ ರೀತಿಯಲ್ಲಿ ತಮ್ಮ ಕಾರ್ಯ ನಿರ್ವಹಿಸಿದ್ದಕ್ಕಾಗಿ ಅವರಿಗೂ ನನ್ನ ಹೃತ್ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸಲು ಇಚ್ಛಿಸುತ್ತೇನೆ.

ನಾನು ಈ ಕೃತಿಯ ಇತಿಮಿತಿಗಳಿಗೆ ಸಂಪೂರ್ಣ ಜವಬ್ದಾರಿಯನ್ನು ಹೊರುತ್ತೇನೆ ಎಂದು ಹೆಚ್ಚಿನದಾಗಿ ಹೇಳಬೇಕಾದ ಅಗತ್ಯವಿಲ್ಲವೆಂದು ಬಾವಿಸುತ್ತೇನೆ.

ಯುಗಾದಿ - 18 ನೇ ಮಾರ್ಚಿ 1999
ಬೆಂಗಳೂರು

ಡಾ : ಸಂದೀಪ್ ಶಾಸ್ತ್ರಿ
ರಾಜ್ಯಶಾಸ್ತ್ರ ವಿಭಾಗ
ಬೆಂಗಳೂರು ವಿಶ್ವವಿದ್ಯಾಲಯ

## ಶ್ರೀ ಎಸ್. ನಿಜಲಿಂಗಪ್ಪನವರ ಅನಿಸಿಕೆ

ಗ್ರಂಥಾಲಯ ಉಪ ಸಮಿತಿಯು ಶ್ರೀ ಎಸ್. ನಿಜಲಿಂಗಪ್ಪನವರ ಬಗೆಗಿನ ಕಿರುಹೊತ್ತಿಗೆಯನ್ನು ಹೊರತರುವ ಮುನ್ನ ಈ ಬಗ್ಗೆ ಅವರನ್ನು ಖುದ್ದಾಗಿ ಭೇಟಿ ಮಾಡಲು ತೀರ್ಮಾನಿಸಿತು. ಸಮಿತಿಯು ಅವರನ್ನು ಭೇಟಿ ಮಾಡುವ ಪೂರ್ವದಲ್ಲಿ ಕಿರುಹೊತ್ತಿಗೆಯ ಕರಡು ಪ್ರತಿಯನ್ನು ಶ್ರೀ ನಿಜಲಿಂಗಪ್ಪನವರು ಅವಗಾಹನೆಗಾಗಿ ಅಂಚೆಯ ಮೂಲಕ ಕಳುಹಿಸಿಕೊಡಲಾಯಿತು. ತದನಂತರ ಸಮಿತಿಯು ದಿನಾಂಕ 12-3-1999 ರಂದು ಶ್ರೀ ನಿಜಲಿಂಗಪ್ಪನವರನ್ನು ಚಿತ್ರದುರ್ಗದ ಅವರ ನಿವಾಸದಲ್ಲಿ ಭೇಟಿ ಮಾಡಿದ ಸಂದರ್ಭದಲ್ಲಿ, ಸದರಿ ಭೇಟಿಯ ಉದ್ದೇಶವನ್ನು ವಿವರಿಸುತ್ತಾ, ಹಲವಾರು ಗಣ್ಯವ್ಯಕ್ತಿಗಳ ಪರಿಚಯ ಪುಸ್ತಕದ ಬಗ್ಗೆ ವಿವರಣೆ ನೀಡಲಾಯಿತು. ಇಂದಿನ ಯುವ ಪೀಳಿಗೆಯವರಿಗೆ ರಾಜ್ಯದ ಹಿರಿಯ ರಾಜಕೀಯ ಮುತ್ಸದ್ದಿಗಳ ಬಗ್ಗೆ ಮಾರ್ಗದರ್ಶನವನ್ನೀಯುವ ನಿಟ್ಟಿನಲ್ಲಿ ಈ ಕಿರುಹೊತ್ತಿಗೆಗಳ ರಚನೆಯ ಕಾರ್ಯವನ್ನು ಉಪ ಸಮಿತಿಗೆ ವಹಿಸಲಾಗಿದೆಯೆಂದು ತಿಳಿಸಲಾಯಿತು. ಈಗಾಗಲೇ ಶ್ರೀ ಎಸ್. ನಿಜಲಿಂಗಪ್ಪನವರಿಗೆ ಕಳುಹಿಸಿ ಕೊಡಲಾಗಿದ್ದ ಕರಡು ಪ್ರತಿಯ ಬಗ್ಗೆ ಅವರ ಅಭಿಪ್ರಾಯ ಮತ್ತು ತೆಗೆದು ಹಾಕುವ ಅಥವಾ ಸೇರಿಸುವ ವಿಷಯಗಳೇನಾದರೂ ಇದ್ದಲ್ಲಿ ಅದನ್ನು ತಿಳಿಸುವಂತೆ ಮನವಿ ಮಾಡಲಾಯಿತು. ಶ್ರೀಯುತರು ವ್ಯಕ್ತಪಡಿಸಿದ ಕೆಲವು ಅನಿಸಿಕೆಗಳು ಕೆಳಕಂಡಂತಿದೆ :

ಶ್ರೀ ಎಸ್. ನಿಜಲಿಂಗಪ್ಪನವರು ಸಮಿತಿಯು ಕೈಗೆತ್ತಿಕೊಂಡಿರುವ ಕಾರ್ಯವನ್ನು ಶ್ಲಾಘಿಸಿದರಲ್ಲದೆ, ತಮ್ಮ ಬಗೆಗಿನ ಕಿರುಹೊತ್ತಿಗೆಯಲ್ಲಿ ಮೂಡಿರುವ ಅವರ ವಿಚಾರಧಾರೆ, ಕಾರ್ಯ ವೈಖರಿ ಇತ್ಯಾದಿ ಅಭಿಪ್ರಾಯಗಳು ಸರಿಯಾಗಿವೆಯೆಂದು ತಿಳಿಸಿದರು. ಸದರಿ ಕಿರುಹೊತ್ತಿಗೆಯಲ್ಲಿ ತೆಗೆದು ಹಾಕಬೇಕಾದ ಯಾವುದೇ ಅಂಶಗಳು ಇಲ್ಲವೆಂದು ಹೇಳಿದ ಅವರು ಇಂದಿನ ರಾಜಕೀಯ ವ್ಯವಸ್ಥೆಯಲ್ಲಿ ಅದಿಕಾರದ ಹಂತಗಳಲ್ಲಿ ಹೆಚ್ಚಿರುವ ಭ್ರಷ್ಟಾಚಾರದ ಬಗೆಗೆ ತಮ್ಮ ಅಸಮಾಧಾನವನ್ನು ವ್ಯಕ್ತಪಡಿಸಿದರು. 1950 ರಲ್ಲಿ ಅವರು ರಾಜ್ಯಗಳ ಪುನರ್ ಸಂಗಡಣೆಯ ಬಗ್ಗೆ ಸಂಸತ್ತಿನಲ್ಲಿ ಎರಡು ಗಂಟೆಗಳ ಕಾಲ ಮಾಡಿದ ಭಾಷಣವನ್ನು ನೆನಪಿಗೆ ತಂದುಕೊಂಡರು.

ಭಾಷಾಂತರಿಸಲಾಗಿರುವ ಆವೃತ್ತಿಗಳಲ್ಲಿ ರಾಜಕೀಯ ಗಣ್ಯ ವ್ಯಕ್ತಿಗಳ ಬಗೆಯೂ ಮಾತನಾಡಿ ತಮಗೆ ಅವರೊಂದಿಗೆ ಇದ್ದಂತಹ ಒಡನಾಟ ಮತ್ತು ವ್ಯಕ್ತಿತ್ವಗಳ ಬಗ್ಗೆ ಮೆಚ್ಚುಗೆಯನ್ನು ವ್ಯಕ್ತಿಪಡಿಸಿದರು. ಶ್ರೀ ಕೆಂಗಲ್ ಹನುಮಂತಯ್ಯ ಮತ್ತು ಶ್ರೀ ಗೋಪಾಲ ಗೌಡ ಅವರನ್ನು ಅಪಾರವಾಗಿ ಕೊಂಡಾಡಿದ ಶ್ರೀಯುತರು ಸಾರ್ವಜನಿಕ ಹಿತಾಸಕ್ತಿಗಾಗಿ ವೈಯಕ್ತಿಕ ಜೀವನದಲ್ಲಿ ಅನುಭವಿಸಿದ ನೋವಿನ ಬಗ್ಗೆಯೂ ತಮ್ಮ ರಳರಳಿಯನ್ನು ವ್ಯಕ್ತಿಪಡಿಸಿದರು.

ಈ ಎಲ್ಲಾ ಕಿರುಹೊತ್ತಿಗೆಗಳನ್ನು ರಾಜ್ಯದ ಪ್ರಮುಖ ಗ್ರಂಥಾಲಯಗಳಲ್ಲಿ ಸಾರ್ವಜನಿಕ ಪರಾಮರ್ಶೆಗಾಗಿ ಇಡುವುದರ ಜೊತೆಗೆ ಮಾರಾಟ ಮಾಡುವ ವ್ಯವಸ್ಥೆ ಮಾಡಬೇಕೆಂದು ಅಭಿಪ್ರಾಯ ಪಟ್ಟರು. ಇತರೇ ಗಣ್ಯ ವ್ಯಕ್ತಿಗಳ ಪ್ರತ್ಯೇಕ ಕಿರುಹೊತ್ತಿಗೆಗಳನ್ನು ಹೊರತರಲು ಉದ್ದೇಶಿಸಿರುವ ಸಮಿತಿಯ ಕಾರ್ಯ ಸುಗಮವಾಗಿ ನಡೆಯಲೆಂದು ಹಾರೈಸಿದರು.

ಬಿ.ಬಿ. ಶಿವಪ್ಪ
ಅಧ್ಯಕ್ಷರು
ಗ್ರಂಥಾಲಯ ಉಪ ಸಮಿತಿ
ಕರ್ನಾಟಕ ವಿಧಾನಮಂಡಲ

ದಿನಾಂಕ : 15-3-1999

# ಶ್ರೀ. ಎಸ್. ನಿಜಲಿಂಗಪ್ಪ
## (ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹ ಮಾಲಿಕೆ)

## ಪರಿವಿಡಿ

## ಭಾಗ - 1

## ಶ್ರೀ ಸಿದ್ದವನಹಳ್ಳಿ ನಿಜಲಿಂಗಪ್ಪ - ವ್ಯಕ್ತಿತ್ವ

"ನಿಜಲಿಂಗಪ್ಪನವರು ಗಾಂಧಿ ಯುಗದ ಸಂಕೇತ ಆಧುನಿಕ ಕರ್ನಾಟಕದ ರೂವಾರಿ ಹಾಗೂ ಸರಿಯಲ್ಲದಕ್ಕೆ ರಾಜಿಯಾಗದ ಪ್ರಾಮಾಣಿಕ ವ್ಯಕ್ತಿ"[1]. ಉಪ ರಾಷ್ಟ್ರಪತಿ ಶ್ರೀ ಕೃಷ್ಣಕಾಂತ್‌ರವರು ನಿಜಲಿಂಗಪ್ಪನವರ 97ನೇ ಹುಟ್ಟು ಹಬ್ಬದಲ್ಲಿ ಗೌರವಿಸುತ್ತಾ ಆಡಿದ ಮಾತುಗಳು ಕರ್ನಾಟಕದ ಈ ಧೀಮಂತ ಮಗನ ವ್ಯಕ್ತಿತ್ವ ಮತ್ತು ಕೊಡುಗೆಗೆ ಸೂಕ್ತವಾಗಿ ಕನ್ನಡಿ ಹಿಡಿಯುತ್ತದೆ. ಈ ಸಂದರ್ಭದಲ್ಲಿ ನಿಜಲಿಂಗಪ್ಪನವರ ಪ್ರತಿಕ್ರಿಯೆ ಗಮನಾರ್ಹ. ತಮ್ಮ ಜೀವನದುದ್ದಕ್ಕೂ, ತಮಗೆ ಬಹಳ ತೃಪ್ತಿ ಕೊಡುವ ವಿಷಯವೆಂದರೆ, ತಾನೆಂದೂ ತಿಳಿದೂ ಯಾವ ತಪ್ಪನ್ನೂ ಮಾಡಿಲ್ಲ ಎಂಬ ಮಾತನ್ನು ಒತ್ತಿ ನುಡಿದರು.

ಸಾರ್ವಜನಿಕ ಜೀವನದ ಸುಧೀರ್ಘ ಕಾಲದಲ್ಲಿ ನಿಜಲಿಂಗಪ್ಪನವರು ನಾನಾ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡು ಆ ಕೆಲಸಗಳಲ್ಲಿ ತಮ್ಮ ಪ್ರಭಾವ ಮತ್ತು ಗುರುತನ್ನು ಬಿಟ್ಟವರು. ಪ್ರಮುಖವಾಗಿ. ತಮ್ಮೊಡನೆ ಕೆಲಸ ಮಾಡಿದವರಿಗಾಗಲಿ ಅಥವಾ ತಮ್ಮ ಉತ್ತರಾಧಿಕಾರಿಗಳಿಗಾಗಲೀ ಎಂದಿಗೂ ಉಳಿಯುವಂತಹ ಅಸ್ಥಿತ್ವವನ್ನು ಕಲ್ಪಿಸಿಕೊಂಡವರು. ರಾಜಾಳ್ವಿಕೆಯಲ್ಲಿದ್ದ ಮೈಸೂರು ಸಂಸ್ಥಾನದಲ್ಲಿ ಜವಾಬ್ದಾರಿಯುತ ಸರ್ಕಾರದ ರಚನೆಗೆ ಮತ್ತು ಸ್ವಾತಂತ್ರ್ಯ ಸಂಗ್ರಾಮ ಕಾಲದಲ್ಲಿ ಪಟ್ಟು ಬಿಡದ ವೀರ ಹೋರಾಟಗಾರ ಎಂಬ ಹೆಸರನ್ನು ಪಡೆದರು. ಕರ್ನಾಟಕ ಏಕೀಕರಣ ಚಳುವಳಿಯಲ್ಲಿ ನಿಜಲಿಂಗಪ್ಪನವರ ಪಾತ್ರವನ್ನು ಡೆಕನ್ ಹೆರಾಲ್ಡ್ (ಬೆಂಗಳೂರಿನ ಹೆಸರಾಂತ ದಿನ ಪತ್ರಿಕೆ) ತನ್ನ ಸಂಪಾದಕೀಯದಲ್ಲಿ ಅವರನ್ನು "ಅಖಂಡ ಕರ್ನಾಟಕದ ಧೈರ್ಯಶಾಲಿ ಮುಖಂಡ"[2] ಎಂದು ಕರೆದಿತ್ತು. ನಿಜಲಿಂಗಪ್ಪನವರು ವಿಶಾಲ ಮೈಸೂರು ಕಾಂಗ್ರೆಸ್ ಶಾಸಕಾಂಗ ಪಕ್ಷದ ನಾಯಕನಾಗಿ ಆಯ್ಕೆ ಆದಾಗ ಅದೇ ಪತ್ರಿಕೆಯು ಏಕೀಕೃತ ಕರ್ನಾಟಕಕ್ಕಾಗಿ ಎಡೆಬಿಡದೆ ಹೋರಾಡಿದ ನಾಯಕನಿಗೆ ಯಾರೂ ತಿರಸ್ಕರಿಸಲಾಗದ ಮತ್ತು ಎಂದೋ ಸಲ್ಲಬೇಕಿದ್ದ ಗೌರವ"[3] ಎಂದು ವರ್ಣಿಸಿತ್ತು. ಮೈಸೂರು ರಾಜ್ಯದ ಮುಖ್ಯಮಂತ್ರಿಯಾಗಿ ಭಾವನಾತ್ಮಕವಾಗಿ ಹಾಗೂ ಆಡಳಿತಾತ್ಮಕವಾಗಿ ಮೈಸೂರು ರಾಜ್ಯದ ಐದು ಭಾಗಗಳನ್ನು ಒಂದುಗೂಡಿಸಿ ಸಮರ್ಥ, ಜನಪರ ಮತ್ತು ಜನರ ಆಶೋತ್ತರಗಳಿಗೆ ಸ್ಪಂದಿಸುವ ಆಡಳಿತವನ್ನು ನೀಡುವಲ್ಲಿ ಪ್ರಮುಖ ಪಾತ್ರ ವಹಿಸಿದರು. ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ಸಿನ ಅಧ್ಯಕ್ಷರಾಗಿದ್ದಾಗ ಅವರ ನಾಯಕತ್ವದ ನೈಪುಣ್ಯತೆಯ ಪರೀಕ್ಷೆಗೆ ಒಳಪಟ್ಟಾಗ ತಮ್ಮ ಸಾಮರ್ಥ್ಯವನ್ನು ಅಖಿಲ ಭಾರತ ಮಟ್ಟದಲ್ಲಿ ಪ್ರದರ್ಶಿಸಿದರು. ಅವರ ಸರಳತೆ, ವ್ಯಕ್ತಿ ಸಮಗ್ರತೆ, ವಚನ ಬದ್ಧತೆ, ನಿಷ್ಪಕ್ಷಪಾತ ಮತ್ತು ಪರಿಪಕ್ವತೆ ನಿಜಲಿಂಗಪ್ಪನವರ ಗುಣ ಮತ್ತು ವ್ಯಕ್ತಿತ್ವದ ಅವಿಭಾಜ್ಯ ಅಂಗವಾಗಿತ್ತು.

---

1. ಡೆಕನ್ ಹೆರಾಲ್ಡ್ (ಬೆಂಗಳೂರು) 11 ಡಿಸೆಂಬರ್ 1998.
2. ಡೆಕನ್ ಹೆರಾಲ್ಡ್ (ಬೆಂಗಳೂರು) 22 ಅಕ್ಟೋಬರ್ 1956.
3. ಡೆಕನ್ ಹೆರಾಲ್ಡ್ (ಬೆಂಗಳೂರು) 23 ಅಕ್ಟೋಬರ್ 1956.

ಡಿಸೆಂಬರ್ 10 ರಂದು 1902ರಲ್ಲಿ ಬಳ್ಳಾರಿ ಜಿಲ್ಲೆಯ ಹಡಗಲಿ ತಾಲ್ಲೂಕಿನ ಹಲವಾಗಲು ಗ್ರಾಮದಲ್ಲಿ ಜನಿಸಿದ ನಿಜಲಿಂಗಪ್ಪನವರು ನಂತರ ಸಿದ್ದವನಹಳ್ಳಿಯಲ್ಲಿ ವಾಸಮಾಡಿ ಸಿದ್ದವನಹಳ್ಳಿ ನಿಜಲಿಂಗಪ್ಪ ಎಂದು ಕರೆಯಲ್ಪಟ್ಟರು. ತಮ್ಮ ಪ್ರಾಥಮಿಕ ವಿದ್ಯಾಭ್ಯಾಸವನ್ನು ಚಿತ್ರದುರ್ಗ ಮತ್ತು ದಾವಣಗೆರೆಯಲ್ಲಿ ಮುಗಿಸಿ ನಂತರ ಬಿ.ಎ. ಪದವಿಯನ್ನು ಬೆಂಗಳೂರಿನಲ್ಲಿ ಮತ್ತು ಕಾನೂನು ಪದವಿಯನ್ನು ಪುಣೆಯಲ್ಲಿ ಪಡೆದುಕೊಂಡರು.

ನಿಜಲಿಂಗಪ್ಪನವರು 1926ರಲ್ಲಿ ಚಿತ್ರದುರ್ಗದಲ್ಲಿ ತಮ್ಮ ವಕೀಲ ವೃತ್ತಿಯನ್ನು ಆರಂಭಿಸಿದರು. ತಮ್ಮ ಕಾರ್ಯದೀಕ್ಷೆ ಮತ್ತು ಕಾನೂನು ಶಾಸ್ತ್ರದ ಜ್ಞಾನದಿಂದ ಕಾನೂನು ವಲಯದಲ್ಲಿ ಉತ್ತಮ ಹೆಸರನ್ನು ಪಡೆದು ಕೇವಲ ಸ್ಥಳೀಯ ನ್ಯಾಯಾಲಯದಲ್ಲೇ ಅಲ್ಲದೇ ಬೆಂಗಳೂರಿನಲ್ಲಿದ್ದ ಉಚ್ಚ ನ್ಯಾಯಾಲಯದಲ್ಲಿ ಕೂಡಾ ವಕೀಲ ವೃತ್ತಿ ಮಾಡುತ್ತಿದ್ದರು. 'ಬಡವರ ಬಂಧು' ಎಂದೇ ಹೆಸರಾಗಿದ್ದ ನಿಡಲಿಂಗಪ್ಪನವರು ಆರ್ಥಿಕವಾಗಿ ಹಿಂದುಳಿದವರ ಮೊಕದ್ದಮೆಗಳನ್ನು ವಾದಿಸುತ್ತಾ ಭೂ ಸುಧಾರಣೆ ಮತ್ತು ಉಳುವವರಿಗೇ ಭೂಮಿಯನ್ನು ಕೊಡಿಸುವಲ್ಲಿ ನಿರಂತರ ಹೋರಾಡಿದರು. ವಕೀಲರಾಗಿ ಅವರ ಖ್ಯಾತಿಯ ಬಗ್ಗೆ ಟಿಪ್ಪಣಿ ಮಾಡುತ್ತಾ ಪಂಪ ಪ್ರಶಸ್ತಿ ವಿಜೇತ ಡಿ. ಜವರೇಗೌಡರು ಹೇಳುತ್ತಾರೆ: " ಮೊಕದ್ದಮೆಯ ಸೋಲು ಗೆಲುವುಗಳಿಂದ ಕುಗ್ಗುವ ಹಾಗೂ ಹಿಗ್ಗುವ ಪ್ರವೃತ್ತಿಯವರಲ್ಲ. ತಮಗೆ ಸರಿಯೆಂದು ಕಂಡದ್ದನ್ನು, ಯುಕ್ತವಾದ ತರ್ಕವನ್ನೊಡ್ಡಿ, ಪ್ರಾಮಾಣಿಕವಾಗಿ ವಾದಿಸುವಷ್ಟರಿಂದಲೇ ಅವರಿಗೆ ತೃಪ್ತಿ. ಆಸೆ ಆಮಿಷಗಳ ಮೂಲಕ ನ್ಯಾಯ ಮೂರ್ತಿಗಳನ್ನೊಲಿಸುವ, ಕಕ್ಷಿಗಾರನಿಗೆ ಗೊತ್ತಾಗದಂತೆ ಎದುರು ಪಕ್ಷದ ವಕೀಲನೊಡನೆ ರಹಸ್ಯ ಸಂಧಾನದಲ್ಲಿ ತೊಡಗುವ ಸಾಕ್ಷಿಗಳಿಂದ ಸುಳ್ಳು ಹೇಳಿಸುವ ಅಪರಾಧಿಗಳಿಗೆ ಪ್ರೋತ್ಸಾಹ ಕೊಡುವ ಅಧಿಕಾರಿಗಳನ್ನು ಎದುರು ಹಾಕಿಕೊಳ್ಳುವ ಭ್ರಷ್ಟಾಚಾರಕ್ಕೆ ಅವರು ಹೊರತು" [4].

ನಿಜಲಿಂಗಪ್ಪನವರ ರಾಜಕೀಯ ದೃಷ್ಟಿಕೋನವನ್ನು ಪ್ರಭಾವಿಸಿ ರೂಪಿಸಿದ ಅಂಶಗಳು ಅನೇಕ. ಅವರು 'ನ್ಯೂ ಇಂಡಿಯಾ' ಪತ್ರಿಕೆಯನ್ನು ಅಪಾರ ಆಸಕ್ತಿಯಿಂದ ಓದುತ್ತಿದ್ದರು. ಅವರ ರಾಜಕೀಯ ಹಾಗೂ ಸಾರ್ವಜನಿಕ ಜೀವನದ ಬಗ್ಗೆಯ ಅಭಿಪ್ರಾಯ ರೂಪಿಸುವಲ್ಲಿ ಪಂಡಿತ್ ಮದನ್ ಮೋಹನ್ ಮಾಲವಿಯ, ಸ್ವಾಮಿ ಶ್ರದ್ಧಾನಂದ ಮತ್ತು ಮಹಾತ್ಮಾಗಾಂಧಿಯವರ ಪ್ರಭಾವ ಸ್ಪಷ್ಟವಾಗಿ ಕಾಣುತ್ತದೆ.

ನಿಜಲಿಂಗಪ್ಪನವರ ಕಾಂಗ್ರೆಸ್ ಪಕ್ಷ ಮತ್ತು ಸ್ವಾತಂತ್ರ್ಯ ಸಂಗ್ರಾಮದೊಡನೆ ಸಂಬಂಧವು ಅವರು 1924ರ ಬೆಳಗಾವಿಯಲ್ಲಿ ನಡೆದ ವಾರ್ಷಿಕ ಕಾಂಗ್ರೆಸ್ ಸಮ್ಮೇಳನದಲ್ಲಿ ಭಾಗವಹಿಸಿದಾಗ ಆರಂಭವಾಯಿತು. ಬೆಳಗಾವಿ ಸಮ್ಮೇಳನದಲ್ಲಿ ಮಹಾತ್ಮಾಗಾಂಧಿ ಭಾಗವಹಿಸುತ್ತಿದ್ದರಿಂದ ಅವರನ್ನು ಪ್ರತ್ಯಕ್ಷವಾಗಿ ನೋಡುವ ಅವಕಾಶದ ಸಲುವಾಗಿ

4. ದೇ. ಜವರೇಗೌಡ: ಕರ್ನಾಟಕ ರೂವಾರಿ ಪುಟ: 54

ನಿಜಲಿಂಗಪ್ಪನವರು ಹೊರಟಿದ್ದರು. ಆರ್ಥಿಕ ತೊಂದರೆಗಳಿಂದಾಗಿ ಬೆಳಗಾವಿ ಸೇರಲು ಹಣ ಹೊಂದಿಸಲು ಬಹಳ ಕಷ್ಟಪಡಬೇಕಾಯಿತು. ಅವರ ಮಿತ್ರನ ತಂದೆಯೊಬ್ಬರು ಹಣ ಸಂದಾಯ ನೀಡಿದ್ದರಿಂದ ಬೆಳಗಾವಿಗೆ ಹೋಗಿ ಕಾಂಗ್ರೆಸ್ ಸಮ್ಮೇಳನವನ್ನು ನೋಡಿ ಮಹಾತ್ಮಾಗಾಂಧಿಯವರು ನಡೆಸುತ್ತಿದ್ದ ಚಳುವಳಿಯಲ್ಲಿ ಭಾಗವಹಿಸಲು ಅವರ ಮನವಿಯನ್ನು ಕೇಳಿದರು. ಗಾಂಧಿಯವರ ಭಾಷಣ ನಿಜಲಿಂಗಪ್ಪನವರ ಮೇಲೆ ಮಾಸಲಾಗದ ಅಚ್ಚೊತ್ತಿತ್ತು.

ಚಿತ್ರದುರ್ಗದಲ್ಲಿ ಕಾಂಗ್ರೆಸ್ ಪಕ್ಷದ ಘಟಕ ಸ್ಥಾಪನೆಯಲ್ಲಿ ನಿಜಲಿಂಗಪ್ಪನವರು ಪ್ರಮುಖ ಪಾತ್ರ ವಹಿಸಿದ್ದರು. ನಂತರ, 1936ರಲ್ಲಿ, ಅವರು ಚಿತ್ರದುರ್ಗ ಜಿಲ್ಲಾ ಕಾಂಗ್ರೆಸ್‌ನ ಅಧ್ಯಕ್ಷರಾದರು. ಅವರು ಯಾವಾಗಲೂ ಸಕ್ರಿಯವಾಗಿ ರಾಜಕೀಯ ಚಳುವಳಿಗಳಲ್ಲಿ ಭಾಗವಹಿಸುತ್ತಿದ್ದುದರಿಂದ, ಅವರನ್ನು ಹಲವು ಭಾರಿ ಶಿಕ್ಷೆಗೆ ಗುರಿ ಪಡಿಸಲಾಗಿದ್ದೇ ಅಲ್ಲದೇ, ವಕೀಲ ವೃತ್ತಿಯನ್ನು ಮುಂದುವರೆಸದಂತೆ ನಿಷೇಧಿಸಲಾಯಿತು. 1941ರಲ್ಲಿ ಅವರು ಮೈಸೂರಿನಲ್ಲಿ ನಡೆದ 3ನೇ ಮೈಸೂರು ಕಾಂಗ್ರೆಸ್‌ನ ವಾರ್ಷಿಕ ಸಮ್ಮೇಳನದ ಸತ್ಕಾರ ಸಮಿತಿಯ ಮುಖ್ಯಸ್ಥರಾಗಿದ್ದರು. 1944ರಲ್ಲಿ ತುಮಕೂರಿನಲ್ಲಿ ನಡೆದ ವಾರ್ಷಿಕ ಸಭೆಯಲ್ಲಿ, ಅವರನ್ನು ಮೈಸೂರು ಕಾಂಗ್ರೆಸ್ಸಿನ ಅಧ್ಯಕ್ಷರಾಗಿ ಆಯ್ಕೆಮಾಡಲಾಯಿತು. ಅಲ್ಲದೇ, 1939ರಿಂದ 1951ರ ವರೆಗೆ ಮೈಸೂರು ಕಾಂಗ್ರೆಸ್ ಕಾರ್ಯಕಾರಿ ಸಮಿತಿಯ ಸದಸ್ಯನಾಗಿ ಕಾರ್ಯ ನಿರ್ವಹಿಸಿದರು. ಈ ಅವಧಿಯಲ್ಲಿ ಮೈಸೂರಿನಲ್ಲಿ ಪ್ರಜಾ ಪ್ರತಿನಿಧಿ ಸರ್ಕಾರಕ್ಕಾಗಿ ನಡೆದ ಚಳುವಳಿಯಲ್ಲಿ ಮುಂದಾಳತ್ವ ವಹಿಸಿ ಸಕ್ರಿಯ ಪಾತ್ರವಹಿಸಿದರು.

ನಿಜಲಿಂಗಪ್ಪನವರು ಕಾಂಗ್ರೆಸ್ ಪಕ್ಷದ ಟಿಕೆಟ್ಟಿನ ಮೇಲೆ ನಿಯೋಜಕ (ಚುನಾಯಿತ) ಸಭೆಗೆ ಬೊಂಬಾಯಿ ಪ್ರಾಂತ್ಯದಿಂದ ಆಯ್ಕೆಯಾದರು. ನಿಯೋಜಕ ಸಭೆಯ ದಾಖಲೆಗಳನ್ನು ಪರಿಶೀಲಿಸಿದಾಗ, ನಿಜಲಿಂಗಪ್ಪನವರು ಯಾವುದೇ ಭಾಷಣಗಳನ್ನು ಮಾಡಿರುವುದು ಕಂಡು ಬರುವುದಿಲ್ಲವಾದರೂ, ಅವರ ತೆರೆ ಮರೆಯ ಪಾತ್ರವು ಸ್ಪಷ್ಟವಾಗಿ ಕಾಣುತ್ತದೆ. ಈ ವಿಷಯವಾಗಿ ಒಂದು ನಿರ್ದಿಷ್ಟ ನಿದರ್ಶನವನ್ನು ಉದಾಹರಣೆಯಾಗಿ ನೀಡಬಹುದು. ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿ (ಈ ಸ್ಥಾನದಲ್ಲಿ 1946ರಿಂದ 1954 ರ ವರೆಗೆ ಇದ್ದರು) ಭಾಷಾವಾರು ರಾಜ್ಯಗಳ ರಚನೆಯ ಬೆಂಗಲಿಗರಲ್ಲಿ ಒಬ್ಬರಾಗಿದ್ದರು. ಇತರ ಪ್ರಾಂತೀಯ ಕಾಂಗ್ರೆಸ್ ಸಮಿತಿ ಅಧ್ಯಕ್ಷರೊಡಗೂಡಿ ನಿಯೋಜಕ ಸಭೆ ಆರಂಭವಾದ ಕೆಲವೇ ವಾರಗಳಲ್ಲಿ, ಈ ಸಭೆಗೆ ಒಂದು ನಿರ್ಣಯವನ್ನು ಮಂಡಿಸಿ 'ಭಾಷಾವಾರು ಪ್ರಾಂತ್ಯಗಳ ರಚನೆಯ ತತ್ವವನ್ನು ಒಪ್ಪಿಕೊಳ್ಳುವಂತೆ ಮತ್ತು ಪುನರ್ ವಿಂಗಡಣೆಗೆ ವ್ಯವಸ್ಥೆ ಮಾಡುವಂತೆ ಕೋರಿದರು.[5] ಆ ಸಮಯದಲ್ಲಿ ನಿಯೋಜಕ ಸಭೆಯ ವಿವಾದಾತ್ಮಕ ವಿಷಯವನ್ನು ಕೈಬಿಡಲಾಯಿತು.[6] ನಂತರ, 28 ನವೆಂಬರ್ 1947 ರಲ್ಲಿ ಇತರೇ ನಿಯೋಜಕ ಸಭೆಯ ಸದಸ್ಯರ ಜೊತೆಗೂಡಿ ಭಾಷಾವಾರು ಪ್ರಾಂತ್ಯಗಳ ರಚನೆಗೆ ಬೆಂಬಲವಾಗಿ ಒಂದು ಹೇಳಿಕೆ ನೀಡಿ ಅದನ್ನು 'ಭಾರತವನ್ನು ಸಕಾರಾತ್ಮಕವಾಗಿ ಒಗ್ಗೂಡಿಸುವಲ್ಲಿ 'ಇಡುವ ಹೆಜ್ಜೆ ಎಂದು ಅಭಿಪ್ರಾಯ ಪಟ್ಟರು.[7]

5. ಗ್ರಾನ್‌ವಿಲ್ ಆಸ್ಟಿನ್ ದಿ ಇಂಡಿಯನ್ ಕಾನ್ಸ್ಟಿಟ್ಯೂಷನ್ ಕಾರ್ನರ್
6. ಮೇಲೆ ಸೂಚಿಸಿದಂತೆ ಸ್ಟೋನ್ ಆಫ್ ಎ ನೇಷನ್ (ಬಾಂಬೆ, ಒಯುಪಿ, 1966) ಪುಟ 241
7. ಗ್ರಾನ್‌ವಿಲ್ ಆಸ್ಟಿನಾ, ಪುಟ 239.

1952ರಲ್ಲಿ ನಡೆದ ಮೊಟ್ಟ ಮೊದಲ ಸಾಮಾನ್ಯ ಚುನಾವಣೆಗಳಲ್ಲಿ ನಿಜಲಿಂಗಪ್ಪನವರು ಚಿತ್ರದುರ್ಗ (ಆಗ ಚಿತ್ರದುರ್ಗ ಎಂದು ಕರೆಯಲಾಗುತ್ತಿತ್ತು)ದಿಂದ ಕಾಂಗ್ರೆಸ್ ಪಕ್ಷದ ಅಭ್ಯರ್ಥಿಯಾಗಿ ಕಿಸಾನ್ ಮಜ್ದೂರ್ ಪ್ರಜಾ ಪಕ್ಷದ ಅಭ್ಯರ್ಥಿಯನ್ನು (ರಾಜ್ಯದಲ್ಲಿ ಅತಿ ಹೆಚ್ಚು ಅಂತರಗಳಲ್ಲಿ ಒಂದಾದ) ಸುಮಾರು 80,000 ಮತಗಳ ತೃಪ್ತಿಕರ ಅಂತರದಿಂದ ಗೆದ್ದರು. ಅವರಿಗೆ ಶೇಕಡಾ 58ಕ್ಕೂ ಹೆಚ್ಚು ಅಧಿಕೃತ ಮತಗಳು ಬಂದಿದ್ದವು.

1952ರಿಂದ 1956 ನಡುವೆ ಲೋಕಸಭಾ ಸದಸ್ಯರಾಗಿದ್ದಾಗ, ನಿಜಲಿಂಗಪ್ಪನರು ಕರ್ನಾಟಕ ಏಕೀಕರಣಕ್ಕಾಗಿ ಅವಿರತವಾಗಿ ಹೋರಾಟ ನಡೆಸಿದರು. ಈ ವಿಷಯಕ್ಕೆ ಸಂಬಂಧಿಸಿದಂತೆ ಪಂಡಿತ್ ನೆಹರೂ ಮತ್ತು ನಿಜಲಿಂಗಪ್ಪನವರ ನಡುವೆ ನಡೆದ ಸ್ವಾರಸ್ಯಕರ ಭೇಟಿಯನ್ನು ಇಲ್ಲಿ ಸ್ಮರಿಸಬಹುದು. ಒಂದು ಸಂದರ್ಭದಲ್ಲಿ ಪಂಡಿತ್‌ಜಿ ನಿಜಲಿಂಗಪ್ಪನವರನ್ನು ಕುರಿತು 'ಈ ಏಕೀಕರಣದ ವ್ಯವಹಾರವನ್ನು ಬಿಡಬಾರದೇಕೆ? 'ಎಂದು ಕೇಳಿದರು. ಅದಕ್ಕೆ ನಿಜಲಿಂಗಪ್ಪನವರ ಉತ್ತರ ಹೀಗಿತ್ತು: 'ಪಂಡಿತ್‌ಜಿ, ಜನರಿಗೆ ಬೇಕಾದುದನ್ನು ನಾನು ಬಿಟ್ಟುಕೊಡಲಾರೆ'.

ನಿಜಲಿಂಗಪ್ಪನವರು ಲೋಕಸಭೆಯ ಸದಸ್ಯರಾಗಿದ್ದಾಗ ಅವರು ಕನ್ನಡ ಜನರ ಹಿತಾಸಕ್ತಿಯನ್ನು ಕಾಪಾಡುವ ಅನಧಿಕೃತ ವಕ್ತಾರ ಎಂಬ ಅಭಿಪ್ರಾಯ ಇತರ ಸದಸ್ಯರಲ್ಲಿತ್ತು. ಅವರು ಸದನದಲ್ಲಿ ಬಹಳ ಕಡಿಮೆ ಬಾರಿ ಮಾತನಾಡಿದ್ದರೂ, ಅವರು ಮಾತನಾಡಿದ ಪ್ರತಿ ಸಂದರ್ಭವೂ ಸ್ಮರಣೀಯವಾಗಿದ್ದು, ಸದಸ್ಯರು ಆಸಕ್ತಿಯಿಂದ ಅವರ ವಾದವನ್ನು ಕೇಳಿ ಆಗಾಗ, ಅವರಿಗೆ ಮಾತನಾಡಲು ಹೆಚ್ಚು ಕಾಲಾವಧಿ ನೀಡಬೇಕೆಂದು ಸಭಾಪತಿಗಳನ್ನು ಕೇಳುತ್ತಿದ್ದರು. ರಾಜ್ಯಗಳ ಪುನರ್‌ರಚನಾ ಸಮಿತಿಯ ವರದಿಯ ಬಗ್ಗೆ ಚರ್ಚೆ ಕುರಿತು ನಿಜಲಿಂಗಪ್ಪನವರ ಆರಂಭಿಕ ಟಿಪ್ಪಣಿ ನಿಜಕ್ಕೂ ಪ್ರಕಟಾರ್ಹ. [8]"ಕರ್ನಾಟಕದ ಪರವಾಗಿ ಮಾತನಾಡಲು ನನ್ನ ಹೆಸರನ್ನು ಸಲಹೆ ಮಾಡಿದ ಹಲವಾರು ಸದಸ್ಯರಿಗೆ ನಾನು ಆಭಾರಿಯಾಗಿದ್ದೇನೆ. ಕರ್ನಾಟಕ ರಾಜ್ಯದ ನಿರ್ಮಾಣ ಕಾರ್ಯಕ್ಕೆ ಭಾವೋದ್ದೀಪ್ತತೆಯಿಂದ ಕೆಲಸ ಮಾಡುತ್ತಿರುವವರರಲ್ಲಿ ನಾನೂ ಒಬ್ಬನೆಂಬುದನ್ನು ಅಲ್ಲಗೆಳೆಯಲಾರದು. ಅಂದ ಮಾತ್ರಕ್ಕೆ ನನಗೆ ಬೇರೆ ರಾಜ್ಯಗಳ ನಿರ್ಮಾಣದಲ್ಲಿ ಕಾತುರತೆ ಇಲ್ಲವೆಂದಾಗಲಿ, ಆಸಕ್ತಿ ಕಡಿಮೆಯೆಂದಾಗಲಿ ಅರ್ಥವಲ್ಲ'.[8]

ನಿಜಲಿಂಗಪ್ಪನವರು ಲೋಕಸಭೆಯಲ್ಲಿ ಮಾಡಿದ ಹಲವೇ ಭಾಷಣಗಳಲ್ಲಿ ಯಾವಾಗಲೂ ಸಭೆಯ ಗಮನವನ್ನು ಕರ್ನಾಟಕದ ಸಮಸ್ಯೆಗಳತ್ತ ಹರಿಸುತ್ತಿದ್ದರು. ಅಂದ ಮಾತ್ರಕ್ಕೆ ರಾಷ್ಟ್ರೀಯ ಸಮಸ್ಯೆಗಳು ಹಾಗೂ ರಾಷ್ಟ್ರೀಯ ಭಾವೈಕ್ಯತೆ ಬಗ್ಗೆ ಅವರಿಗೆ ಕಳಕಳಿ ಇರಲಿಲ್ಲವೆಂದಲ್ಲ. ಅವಕ್ಕೂ ಸಮಾನವಾಗಿ ಬದ್ಧರಾಗಿದ್ದರು. ವಿಶಾಲ ಮೈಸೂರು ರಾಜ್ಯದ

8. ಲೋಕಸಭಾ ಚರ್ಚೆಗಳು vol : 10, 15 ಡಿಸೆಂಬರ್ 1955 ಪುಟ 2792

ರಚನೆಯ ಕುರಿತು ಲೋಕಸಭೆಯಲ್ಲಿ ಅವರು ವ್ಯಕ್ತಪಡಿಸಿದ ಅಭಿಪ್ರಾಯ ಅವರ ಮನೋಭಾವವನ್ನು ಎತ್ತಿ ತೋರಿಸುತ್ತದೆ:[9] ಕರ್ನಾಟಕದ ಬಗ್ಗೆ, ಒಬ್ಬ ಕನ್ನಡಿಗನಾಗಿ, 400 ವರ್ಷಗಳ ನಂತರ, ಬಹುತೇಕ ಕನ್ನಡಿಗರು ವಾಸಮಾಡುವ ಒಂದು ರಾಜ್ಯವನ್ನು ಹೊಂದಿದ್ದೇವೆಂಬುದು, ನನಗೆ ಸಂತಸದ ವಿಷಯ. ಕನ್ನಡಿಗರು ಇದನ್ನು ಅಭಿವೃದ್ಧಿ ಪಡಿಸಿ, ಒಂದು ದೊಡ್ಡ ರಾಜ್ಯದ ಭಾಗವಾಗುತ್ತಾರೆ. ನಾವು ನಮ್ಮ ಸ್ವಂತ ರಾಜ್ಯಕ್ಕಾಗಿ ಒತ್ತಡ ಹಾಕುತ್ತಿರುವಾಗ, ನಾವು ಇದನ್ನು ಸಂಕುಚಿತ ಮನೋಭಾವದಿಂದಾಗಲಿ ಅಥವಾ ಯಾವುದೇ ಸ್ಥಳೀಯ ಭಾವನೆಯಿಂದಾಗಲಿ ಮಾಡುತ್ತಿಲ್ಲವೆಂದು ಸ್ಪಷ್ಟಪಡಿಸಲು ಇಚ್ಛಿಸುತ್ತೇನೆ. ದೇಶ ಪ್ರೇಮ ಹೊಂದಿರುವುದು ಭಾಷಾವಾರು ಪ್ರಾಂತ್ಯಗಳ ವಿರುದ್ಧ ಮಾತನಾಡುವವರ ಏಕಸ್ವಾಮ್ಯವಲ್ಲ. ನಾವೂ ಸಹ ಇತರರಂತೆ ದೇಶಪ್ರೇಮಿಗಳು. ನಮ್ಮ ನಂಬಿಕೆ ಏನೆಂದರೆ ಪೂರ್ಣ ದೇಶದ ಸಮಗ್ರತೆಯು ದೇಶದ ಒಗ್ಗಟ್ಟು, ಬೆಳವಣಿಗೆ, ಅದರ ಅಭಿವೃದ್ಧಿ ಮತ್ತು ಏಕಮತ್ಯವನ್ನು ಜೋಪಾನ ಮಾಡುತ್ತದೆ. ನಾನು ಕರ್ನಾಟಕದಲ್ಲೇ ವಾಸಿಸಿದರೂ, ನಾನು ಮೊದಲು ಭಾರತೀಯ, ನಂತರವೇ ನಾನು ಕರ್ನಾಟಕದವನು ಎಂದು ಭಾವಿಸುತ್ತೇನೆ. ನಾವು ಈ ರಾಜ್ಯಗಳನ್ನು ರಚಿಸುವಾಗ, ಈ ವಿಷಯಗಳ ಬಗ್ಗೆ ಒತ್ತಾಯಪೂರ್ವಕವಾಗಿ ಹೇಳುತ್ತಿದ್ದೇನೆ. ಏಕೆಂದರೆ, ಅವುಗಳ ಬಗ್ಗೆ ನಾವು ಯಾವುದೇ ತೀಕ್ಷ್ಣ ಭಾವನೆಗಳನ್ನು ಹೊಂದಿರಬಾರದು. ನಾವು ಪ್ರತಿ ರಾಜ್ಯವನ್ನು ಒಂದು ಪೂರ್ಣ ಕಣಪಟ್ಟಿಯಂತೆ ಕಟ್ಟಬೇಕು. ಆಗ ಎಲ್ಲ ರಾಜ್ಯಗಳೂ ಪೂರ್ಣವಾಗಿ ಅಭಿವೃದ್ಧಿ ಹೊಂದಿ, ಎಲ್ಲರೂ ಒಗ್ಗಟ್ಟಿನಿಂದ ಜೊತೆಯಾಗಿ ಬಾಳುತ್ತಾ ಅಂತರ ರಾಷ್ಟ್ರೀಯ ಮಟ್ಟದಲ್ಲಿ ಭಾರತದ ಘನತೆಯನ್ನು ಹೆಚ್ಚಿಸಬಹುದು.

ಇದಕ್ಕೂ ಮೊದಲು, 1953ರಲ್ಲಿ, ಲೋಕಸಭೆಯಲ್ಲಿ ಆಂಧ್ರಪ್ರದೇಶ ರಾಜ್ಯ ಮಸೂದೆಯ ಕುರಿತು ಚರ್ಚೆಯಲ್ಲಿ ತುಂಗಭದ್ರಾ ಯೋಜನೆಯ ವಿಷಯವಾಗಿ ಕನ್ನಡಿಗರ ಸ್ನೇಹಪರ ಮನೋಭಾವ ಕುರಿತು ಸದನಕ್ಕೆ ಆಶ್ವಾಸನೆ ನೀಡುತ್ತಾ ಈ ರೀತಿ ಹೇಳಿದರು:[10] "ನಾವು ಈ ವಿಷಯವಾಗಿ ಜಗಳವಾಡಲು ಇಷ್ಟ ಪಡುವುದಿಲ್ಲ ಮತ್ತು ಅದು ಸರಿಯೂ ಅಲ್ಲ. ಮೈಸೂರಿನ ಜನರ ಪರವಾಗಿ ನಾವು ಹೇಳುವುದೆಂದರೆ, ನಾವು ಯಾವುದೇ ನಿರ್ಧಾರಿತ ಒಪ್ಪಂದಕ್ಕೆ ಮುಕ್ತ ಮನಸ್ಸಿನಿಂದ ಇರುತ್ತೇವೆ." [10]

1954ರಲ್ಲಿ ಲೋಕಸಭೆಯಲ್ಲಿ ರೈಲ್ವೆ ಬಜೆಟ್ ಚರ್ಚೆಯಲ್ಲಿ ಭಾಗವಹಿಸುತ್ತಾ ನಿಜಲಿಂಗಪ್ಪನವರು ರೈಲ್ವೇ ಮಂತ್ರಿಗಳ ಗಮನವನ್ನು ಸೆಳೆಯುತ್ತಾ, ಯಾರಾದರೂ ಭಾರತದ ರೈಲ್ವೇ ನಕ್ಷೆಯತ್ತ ಕಣ್ಣು ಹಾಯಿಸಿದರೆ ಪಶ್ಚಿಮ ತೀರ ಮಾರ್ಗದಲ್ಲಿ ವಾಸ್ತವವಾಗಿ ಯಾವುದೇ ರೈಲುಮಾರ್ಗ ಇಲ್ಲದಂತೆ ಕಾಣುತ್ತದೆ ಎಂದರು.[11] ಅದರ ಜೊತೆಗೆ ಆರ್ಥಿಕವಾಗಿ ಬಹಳ ಪ್ರಾಮುಖ್ಯತೆ ಹೊಂದಿರುವುದರಿಂದ ಮಲೆನಾಡು ಪ್ರದೇಶಕ್ಕೆ ರೈಲು ಹೆಚ್ಚಿನ ರೈಲ್ವೇ ಸೌಲಭ್ಯ

9. ಮೇಲೆ ಸೂಚಿಸಿದಂತೆ, ಪುಟ 2796, 2812

10.ಲೋಕಸಭಾ ಚರ್ಚೆಗಳು ವಿ.ಒ.ಎಲ್:6, 3 ಆಗಸ್ಟ್ 1953, ಪುಟ 787

11. ಲೋಕಸಭಾ ಚರ್ಚೆಗಳು ವಿ.ಒ.ಎಲ್.1, 16 ಫೆಬ್ರವರಿ 1954, ಪುಟ 1128

ಒದಗಿಸುವ ವಿಷಯವಾಗಿ ಸಬೆಯ ಗಮನವನ್ನು ಸೆಳೆದರು.[12]

ಪಂಚವಾರ್ಷಿಕ ಯೋಜನೆಗಳ ಬಗ್ಗೆ ಚರ್ಚೆಯಲ್ಲಿ ಭಾಗವಹಿಸಿ ನಿಜಲಿಂಗಪ್ಪನವರು ಲೋಕಸಭೆಯಲ್ಲಿ ಮೊಟ್ಟ ಮೊದಲ ಭಾಷಣ ಮಾಡಿದರು. ತಮ್ಮ ಭಾಷಣದಲ್ಲಿ ದೇಶದ ಮೂಲ ಸಮಸ್ಯೆಗಳನ್ನು ಎದುರಿಸುವಲ್ಲಿ ಯೋಜನಾ ಆಯೋಗದ ಪಾತ್ರವನ್ನು ಪ್ರಶಂಸಿಸುತ್ತಾ, ಅಭಿವೃದ್ಧಿ ಕಾರ್ಯಗಳಲ್ಲಿ ಜನರು ಭಾಗವಹಿಸುವುದು ಅತ್ಯಗತ್ಯ ಎಂಬ ಅಂಶವನ್ನು ಒತ್ತಿ ಹೇಳಿದರು. ಹಾಗೆಯೇ, ಮಲೆನಾಡನ್ನು ಉದಾಹರಣೆಯಾಗಿ ತೆಗೆದುಕೊಂಡು ಹಿಂದುಳಿದ ಪ್ರದೇಶಗಳ ಸಮಸ್ಯೆಗಳ ಬಗ್ಗೆ ಮಾತನಾಡುತ್ತಾ ಭಾರತದ ಇತರ ಪ್ರದೇಶಗಳಿಗೆ ದೊರೆತಂತೆ ದಕ್ಷಿಣ ಭಾರತಕ್ಕೆ ಸಾಕಷ್ಟು ಪ್ರಾಧಾನ್ಯತೆ, ಅಕ್ಕರೆ ಮತ್ತು ಸಹಾನುಭೂತಿ ಸಿಗುತ್ತಿಲ್ಲವೆಂದು ಸದನದ ಗಮನ ಸೆಳೆದರು.[12]

1956 ಅಕ್ಟೋಬರ್ 21 ರಂದು (ವಿಸ್ತಾರ ಮೈಸೂರು ರಾಜ್ಯ ಆರಂಭವಾಗುವ ಹತ್ತು ದಿನದ ಮುನ್ನ) ನಿಜಲಿಂಗಪ್ಪನವರು ಅವಿರೋಧವಾಗಿ ವಿಶಾಲ ಮೈಸೂರು ಕಾಂಗ್ರೆಸ್ ಶಾಸಕಾಂಗ ಪಕ್ಷದ ಮುಖಂಡರಾಗಿ ಆಯ್ಕೆಯಾಗಿ ಅದೇ ವರ್ಷ ನವೆಂಬರ್ 1 ರಂದು ಮುಖ್ಯ ಮಂತ್ರಿಯಾಗಿ ಕಾರ್ಯ ವಹಿಸಿಕೊಂಡರು. ಶಾಸಕಾಂಗ ಪಕ್ಷದ ನಾಯಕತ್ವಕ್ಕೆ ನಿಜಲಿಂಗಪ್ಪನವರ ಹೆಸರನ್ನು ಸೂಚಿಸುತ್ತಾ ಅಂದಿನ ಮುಖ್ಯಮಂತ್ರಿ ಕಡಿದಾಳ್ ಮಂಜಪ್ಪ ನಿಜಲಿಂಗಪ್ಪನವರನ್ನು ಮೈಸೂರಿನವರಾದರೂ ಮೈಸೂರಿನ ಹೊರಗೂ, ನಮ್ಮಲ್ಲಿ ಬಹಳ ಜನಕ್ಕಿಂತ, ಉತ್ತಮ ಸಂಬಂಧವಿರುವ ವ್ಯಕ್ತಿ ಎಂದು ಹೊಗಳಿದರು.[13] ಮೈಸೂರು ಪ್ರದೇಶ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾದ ಚನ್ನಯ್ಯ ಮಾತನಾಡುತ್ತಾ ಕರ್ನಾಟಕದ ಏಕೀಕರಣಕ್ಕಾಗಿ ನಿಜಲಿಂಗಪ್ಪನವರು ಹಗಲು ರಾತ್ರಿ ದುಡಿದಿದ್ದು ಅವರನ್ನು ಶಾಸಕಾಂಗ ಪಕ್ಷದ ನಾಯಕನಾಗಿ ಆಯ್ಕೆಮಾಡಿದ್ದು ಅವರ ಸೇವೆಗೆ ಸೂಕ್ತವಾದ ಕಾಣಿಕೆ ಎಂದರು.[14] ಪಕ್ಷದವರು ತಮಗೆ ನೀಡಿದ ಗೌರವವನ್ನು ಸ್ವೀಕರಿಸುತ್ತಾ ಹೊಸ ಮೈಸೂರು ರಾಜ್ಯಕ್ಕೆ ನನ್ನ ಸೇವೆ ಅವಶ್ಯಕವಾದರೆ ತಾನು ಜವಾಬ್ದಾರಿಯಿಂದ ತಪ್ಪಿಸಿಕೊಳ್ಳುವುದಿಲ್ಲವೆಂದು ನುಡಿದರು. ಅವರ ಬಾಲ್ಯದ ಕನಸಾದ ಕರ್ನಾಟಕ ಏಕೀಕರಣ ಕೊನೆಗೂ ನನಸಾಯಿತು. ಅದೊಂದು ಸಂಭ್ರಮ ಮತ್ತು ಸಂತೋಷದ ವಿಷಯ. ಶಾಸಕಾಂಗ ಪಕ್ಷದ ನಾಯಕರಾಗಿ ನಿಜಲಿಂಗಪ್ಪನವರ ಅವಿರೋಧ ಆಯ್ಕೆ ಕರ್ನಾಟಕದ ಏಕೀಕರಣಕ್ಕೆ ಹೋರಾಡಿದ ಎಲ್ಲರಿಗೂ "ಒಂದು ಶುಭಾರಂಭವಾಗಿ ಏಕೀಕರಣಕ್ಕೆ ಸತತವಾಗಿ ದುಡಿದ ಹೋರಾಟಗಾರನಿಗೆ ಸಲ್ಲಬೇಕಾದ ಸೂಕ್ತ ಕಾಣಿಕೆಯಾಯಿತು".[15]

ನಿಜಲಿಂಗಪ್ಪನವರು ಅಧಿಕಾರ ಸ್ವೀಕರಿಸಿದ ನಂತರ ಎದುರಿಸಬೇಕಿದ್ದ ಸಮಸ್ಯೆಗಳು ಹಲವಾರು. ಭೌಗೋಳಿಕವಾಗಿ ಕರ್ನಾಟಕ ಒಂದಾಗಿದ್ದರೂ, ಪ್ರದೇಶದ ಆಡಳಿತಾತ್ಮಕ

12. ಲೋಕಸಭಾ ಚರ್ಚೆಗಳು ವಿ.ಒ.ಎಲ್ 2, 18 ಡಿಸೆಂಬರ್ 1952 ಪುಟ 2717
13. ಡೆಕನ್ ಹೆರಾಲ್ಡ್ (ಬೆಂಗಳೂರು) 22 ಅಕ್ಟೋಬರ್ 1956
14. ಡೆಕನ್ ಹೆರಾಲ್ಡ್ (ಬೆಂಗಳೂರು) 22 ಅಕ್ಟೋಬರ್ 1956
15. ಡೆಕನ್ ಹೆರಾಲ್ಡ್ (ಬೆಂಗಳೂರು) 23 ಅಕ್ಟೋಬರ್ 1956

ಏಕೀಕರಣಕ್ಕೆ ಸಾಧಿಸಲು ಸಾಕಷ್ಟು ಪ್ರಯತ್ನ, ತಾಳ್ಮೆ ಹಾಗೂ ಮನವೊಲಿಕೆ ಅಗತ್ಯವಾಗಿತ್ತು. ಮುಖ್ಯ ಮಂತ್ರಿಗಳಾಗಿ ಹಲವು ತಿಂಗಳ ನಂತರ ರಾಜ್ಯಪಾಲರ ಭಾಷಣಕ್ಕೆ ಅಭಿನಂದನೆ ಉತ್ತರದಲ್ಲಿ ಈ ರೀತಿ ನುಡಿದರು. 'ಸದನದ ಎಲ್ಲಾ ಸದಸ್ಯರಿಂದ ಮತ್ತು ಹೊಸ ರಾಜ್ಯದ ಭಾಗವಾಗಿ ಐದು ಪ್ರಾಂತ್ಯಗಳ ಪ್ರತಿನಿಧಿಗಳಿಂದ ಹೊಸರಾಜ್ಯ ರಚನೆಯಾಗಿರುವುದು ಬಹಳ ಸಂತಸ ತಂದಿದೆ. ನಿಜವಾಗಿಯೂ, ಸಭೆಯಲ್ಲಿ ಮಾತನಾಡಿದ ಎಲ್ಲ ಸದಸ್ಯರೂ ಸಂಪೂರ್ಣವಾಗಿ ಹೊಸರಾಜ್ಯದ ಪರವಾಗಿ ಮಾತನಾಡಿದ್ದಾರೆ. ಪ್ರತಿಯೊಬ್ಬ ಸದಸ್ಯರೂ ತಮ್ಮ ಉತ್ಸಾಹ, ತೃಪ್ತಿ ಮತ್ತು ಸಂತೋಷದ ಸ್ವಾಗತವನ್ನು ವ್ಯಕ್ತಪಡಿಸಿದ್ದಾರೆ. ಈ ಹೊಸ ರಾಜ್ಯದ ರಚನೆಯನ್ನು ಎಲ್ಲ ರಾಜಕೀಯ ಪಕ್ಷಗಳೂ ಸ್ವಾಗತಿಸಿವೆಯೆಂದು ತಿಳಿದು ಹೊಸರಾಜ್ಯದ ಉದಯಕ್ಕಾಗಿ ಶ್ರಮಿಸಿದ ನಮಗೆಲ್ಲರಿಗೂ ಸಂತಸ ತಂದಿದೆ.'[16]

ನಿಜಲಿಂಗಪ್ಪನವರು ಮುಖ್ಯಮಂತ್ರಿಗಳಾದ ಐದು ತಿಂಗಳೊಳಗೆ ಎರಡನೇ ಮೈಸೂರು ವಿಧಾನ ಸಭೆಯ ಅವಧಿ ಮುಕ್ತಾಯವಾಗಿ ಪಕ್ಷವು ಮೂರನೇ ಸಾಮಾನ್ಯ ಚುನಾವಣೆಗೆ ತಯಾರಾಗಬೇಕಾಯಿತು. ಹೊಸದಾಗಿ ಮೈಸೂರು ರಾಜ್ಯಕ್ಕೆ ಸೇರಿದ ಪ್ರದೇಶಗಳ ನಡುವೆ ಆಡಳಿತಾತ್ಮಕ ಏಕೀಕರಣ ಸಾಧಿಸಿ ಅದಕ್ಕೆ ಸಂಬಂಧಿತ ಸಮಸ್ಯೆಗಳನ್ನು ಸರಿಪಡಿಸಲು ಮುಖ್ಯಮಂತ್ರಿಗಳು ಆರಂಭಿಕ ದಿನಗಳನ್ನು ಕಳೆಯಬೇಕಾಯಿತು. ಎರಡನೇ ಮೈಸೂರು ವಿಧಾನ ಸಭೆಯ ಬೀಳ್ಕೊಡುಗೆ ಸಮಾರಂಭದಲ್ಲಿ ಮಾತನಾಡುತ್ತಾ ನಿಜಲಿಂಗಪ್ಪನವರು ತಮ್ಮ ಕ್ಯಾಬಿನೆಟ್ ಸಹಯೋಗಿಗಳ ಸಹಾಯ ಮತ್ತು ಬೆಂಬಲವನ್ನು ಸ್ಮರಿಸಿದರು. ಆ ಕೆಲಸಕ್ಕೆ ಅವರು ಹೊಸಬರಾಗಿದ್ದರಿಂದ ತಮ್ಮ ಮಂತ್ರಿ ವರ್ಗದ ಮಿತ್ರರ ಆಡಳಿತಾತ್ಮಕ ಅನುಭವದ ಸಹಾಯದಿಂದ ಸರಕಾರ ಏನೇ ಚಿಕ್ಕ ಸಾಧನೆ ಮಾಡಿದ್ದರೂ ಅದಕ್ಕೆ ಕಾರಣ ಎಂದರು. ಮುಂದೆ ಹೇಳುತ್ತಾ: "ನಾನು ನನ್ನ ಕೆಲಸಕ್ಕೆ ಹೊಸಬ. ಅವರಲ್ಲಿ ಬಹಳಷ್ಟು ಜನ ನನ್ನ ಹಳೆಯ ಮಿತ್ರರಾಗಿದ್ದು ಆಡಳಿತ ನಿರ್ವಹಣೆಯಲ್ಲಿ ಉತ್ತಮ ಅನುಭವ ಹೊಂದಿದ್ದರು. ಅವರು ನನಗೆ ನೀಡಿದ ತಿಳುವಳಿಕೆ ಮತ್ತು ಜ್ಞಾನದ ಪರಿಣಾಮವಾಗಿ ನಾನು ನನ್ನ ಮುಕ್ಯಮಂತ್ರಿ ಸ್ಥಾನರನ್ನು ಸುಸೂತ್ರವಾಗಿ ನಿರ್ರಹಿಸುವಲ್ಲಿ ಯಶಸ್ವಿಯಾಗಿದ್ದೇನೆ. ನನಗಿಂತ ಹೆಚ್ಚಾಗಿ ನನ್ನ ಅಲ್ಪ ಯಶಸ್ಸಿನಲ್ಲಿ ಅವರ ಪಾತ್ರ ಹೆಚ್ಚಿನದಾಗಿದೆ."[17]

1957ರ ಚುನಾವಣೆ ನಂತರ ನಿಜಲಿಂಗಪ್ಪನವರು ಕಾಂಗ್ರೆಸ್ ಶಾಸಕಾಂಗ ಪಕ್ಷದ ನಾಯಕರಾಗಿ ಪುನರ್‌ಆಯ್ಕೆಯಾಗಿ ಮುಖ್ಯ ಮಂತ್ರಿಯಾಗಿ ಪ್ರಮಾಣ ವಚನ ಸ್ವೀಕರಿಸಿದರು. ಪಕ್ಷದಲ್ಲಿ ಬಂಡಾಯ ಕಂಡು ಬಂದಾಗ ನಿಜಲಿಂಗಪ್ಪ ಮೇ 1958ರಲ್ಲಿ ಮುಖ್ಯ ಮಂತ್ರಿ ಸ್ಥಾನಕ್ಕೆ ರಾಜೀನಾಮೆ ನೀಡಿದರು. ಮುಂದಿನ ವರ್ಷದಲ್ಲಿ ಪಕ್ಷದೊಳಗಿನ ಜಗಳ ಹಾಗೂ ಪಕ್ಷ ಮತ್ತು ಸರಕಾರದ ನಡುವೆ ಹೊಂದಾಣಿಕೆ ಕಡಿಮೆಯಾಯಿತು. 60ರ ದಶಕದ ಆರಂಭದ ದಿನಗಳನ್ನು ವಿವರಿಸುತ್ತಾ ಡಾ:ಜವರೇಗೌಡ ಈ ರೀತಿ ಹೇಳುತ್ತಾರೆ.[18] ಶಾಸನ ಸಭೆಯ ಕಾಂಗ್ರೆಸ್ ಪಕ್ಷದಲ್ಲಿ ಗುಂಪು ಭಾವನೆ ಬೆಳೆದು ಖಚಿತ ರೂಪ ತಳೆಯಬಹುದಾದ ಭೀತಿ ತಲೆದೋರಿ ನಿಷ್ಠಾವಂತ ಕಾಂಗ್ರೆಸ್ಸಿಗರನ್ನು ಚಿಂತೆಗೆ ಗುರಿಪಡಿಸಿತು. ಮೈಸೂರು

---

16. ಮೈಸೂರು ಸಭೆ ಚರ್ಚೆಗಳು, 24 ಡಿಸೆಂಬರ್ 1956, ಪುಟ 223
17. ಮೈಸೂರು ವಿಧಾನ ಸಭೆ ಚರ್ಚೆಗಳು, 27 ಮಾರ್ಚ್ 1957 ಪುಟ 456
18. ದೇ. ಜವರೇಗೌಡ: ಕರ್ನಾಟಕದ ರುವಾರಿ ಪುಟ:138

ಕಾಂಗ್ರೆಸ್ ಸಮಿತಿ ಮತ್ತು ಕಾಂಗ್ರೆಸ್ ಮಂತ್ರಿಮಂಡಲದ ನಡುವೆ ಸಾಮರಸ್ಯವಿಲ್ಲದೇ ಅದರ ಪರಿಣಾಮವಾಗಿ ಕಾಂಗ್ರೆಸ್ ಸಂಸ್ಥೆ ದುರ್ಬಲವಾಗಿ ಪ್ರಜಾ ಕೋಟಿಯೊಡನೆ ಸಂಬಂಧ ಸಡಿಲವಾಗಬಹುದಾದ ಲಕ್ಷಣಗಳು ಬರುತ್ತಿದ್ದವು, ಸಂಸ್ಥೆಗಿಂತ ಸರ್ಕಾರವೇ ಹೆಚ್ಚಿನದೆಂಬ ಭಾವನೆ ಬೇರೂರಿತು.

1962ರ ಸಾಮಾನ್ಯ ಚುನಾವಣೆ ಸಮೀಪವಾಗುತ್ತಿದ್ದಂತೆ ಪಕ್ಷದೊಳಗಿನ ಬೆಳವಣಿಗೆಗಳನ್ನು ಗಮನದಲ್ಲಿಟ್ಟುಕೊಂಡು ನಿಜಲಿಂಗಪ್ಪನವರ ಬೆಂಬಲಿಗರು ಅವರನ್ನು ಮತ್ತೆ ಮುಖ್ಯಮಂತ್ರಿಯಾಗಬೇಕೆಂದು ಬಲವಾಗಿ ಮತ್ತು ಸಮಯದಿಂದ ಸಮಯಕ್ಕೆ ಅಭಿಪ್ರಾಯ ವ್ಯಕ್ತಪಡಿಸುತ್ತಿದ್ದರು. ನಿಜಲಿಂಗಪ್ಪನವರು 1962ರ ವಿಧಾನಸಭಾ ಚುನಾವಣೆಯಲ್ಲಿ ಹೊಸದುರ್ಗ ಕ್ಷೇತ್ರದಿಂದ ಸ್ಪರ್ಧಿಸಿದರು. ಪಕ್ಷದ ನಾಯಕನ ಪಟ್ಟಕ್ಕೆ ಅನೇಕ ಕಾಂಗ್ರೆಸ್ಸಿಗರ ಪ್ರಕಾರ ನಿಜಲಿಂಗಪ್ಪನವರೇ ಸ್ವಾಭಾವಿಕ ಆಯ್ಕೆ ಆಗಿದ್ದರು. ಆದರೆ, ಹೊಸದುರ್ಗದಲ್ಲಿ ನಿಜಲಿಂಗಪ್ಪನವರ ಸೋಲು ಅವರ ಬೆಂಬಲಿಗರ ಲೆಕ್ಕಾಚಾರವನ್ನು ತಲೆಕೆಳಗು ಮಾಡಿತು. ನಿಜಲಿಂಗಪ್ಪನವರ ಸೋಲಿಗೆ ಜವಾಬ್ದಾರಿಯಾದ ಅಂಶಗಳು ಮತ್ತು ಶಕ್ತಿಗಳನ್ನು ಕುರಿತು ಡಾ:ಜವರೇಗೌಡ ಈ ರೀತಿ ವಿಸ್ತರಿಸುತ್ತಾರೆ:'ಹೊಸದುರ್ಗ ಕ್ಷೇತ್ರದಿಂದ ಸ್ಪರ್ಧಿಸಿದ್ದ ನಿಜಲಿಂಗಪ್ಪನವರು ಸೋಲನ್ನು ಅನುಭವಿಸಬೇಕಾಗುತ್ತದೆ. ಜಾತೀಯತೆ, ಅಂಥ ಶತ್ರುಗಳು ಕಿತಾಪತಿ ಹಾಗೂ ಕೆಲವು ವೀರಶೈವ ಮತಗಳ ಕೈವಾಡದಿಂದಾಗಿ ಅವರು ಪರಾಜಿತಗೊಳ್ಳುತ್ತಾರೆ. ಅವರ ಈ ಪರಾಭವಕ್ಕೆ ಮೈಸೂರಿನ ಮಾಜಿ ಮಹಾರಾಜರೂ ಸಹಾ ಕಾರಣರೆಂಬ, ವಿರೋಧಿ ಸ್ಪರ್ಧಿಗೆ ಮೂರು ಲಕ್ಷ ರೂಪಾಯಿ ಮೊತ್ತ ಕಳುಹಿಸಿಕೊಟ್ಟರೆಂಬ ವದಂತಿಯು ಆ ಕಾಲದಲ್ಲಿ ಎಲ್ಲೆಲ್ಲೂ ಹಬ್ಬಿತ್ತು. ಆಗಿನ ಮಹಾರಾಜರ ಹೆಸರಿನೊಂದಿಗೆ ಸುತ್ತೂರು ಮಠವನ್ನು ಗಂಟು ಹಾಕುತ್ತಿದ್ದುದುಂಟು."[19]

1962ರ ವಿಧಾನಸಭಾ ಚುನಾವಣೆಯಲ್ಲಿ ನಿಜಲಿಂಗಪ್ಪ ಸೋತಿದ್ದರೂ, ಅವರನ್ನು ಶಾಸಕಾಂಗ ಪಕ್ಷದ ನಾಯಕರನ್ನಾಗಿ ಮಾಡಲು ಅವರ ಬೆಂಬಲಿಗರು ಕಾತುರರಾಗಿದ್ದರು. ಸೋತ ನಂತರ ಆ ಸ್ಥಾನಕ್ಕೆ ನಿಜಲಿಂಗಪ್ಪನವರು ಆಸಕ್ತರಾಗಿರಲಿಲ್ಲ. ಕೊನೆಗೆ, ನಿಜಲಿಂಗಪ್ಪ ಮತ್ತು ಅವರ ಬೆಂಬಲಿಗರು ಎಸ್.ಆರ್.ಕಂಠಿಯವರ ಹೆಸರನ್ನು ಸೂಚಿಸಿದ್ದರ ಪರಿಣಾಮವಾಗಿ ಕಂಠಿ ಶಾಸಕಾಂಗ ಪಕ್ಷದ ನಾಯಕರಾಗಿ ಆಯ್ಕೆಯಾಗಿ ಮುಖ್ಯ ಮಂತ್ರಿಯಾಗಿ ಅಧಿಕಾರ ಸ್ವೀಕರಿಸಿದರು. ಹಲವು ತಿಂಗಳುಗಳಲ್ಲಿ ನಿಜಲಿಂಗಪ್ಪನವರು ಬಾಗಲಕೋಟೆ ವಿಧಾನ ಸಭಾ ಕ್ಷೇತ್ರದಿಂದ ಉಪ ಚುನಾವಣೆಯಲ್ಲಿ ಅವಿರೋಧವಾಗಿ ಆಯ್ಕೆಯಾದರು. ಅವರ ಆಯ್ಕೆ ಶಾಸಕಾಂಗ ಪಕ್ಷದ ನಾಯಕರಾಗಲು ದಾರಿ ಮಾಡಿತು. 21ನೇ ಜೂನ್ 1962ರಲ್ಲಿ ನಡೆದ ಪಕ್ಷದ ಶಾಸಕರ ಸಭೆಯಲ್ಲಿ ಅಂದಿನ ಮುಖ್ಯಮಂತ್ರಿ ಕಂಠಿ ಶಾಸಕಾಂಗ ಪಕ್ಷದ ನಾಯಕನ ಸ್ಥಾನಕ್ಕೆ ನಿಜಲಿಂಗಪ್ಪನವರ ಹೆಸರನ್ನು ಸೂಚಿಸಿದರು. ನಿಜಲಿಂಗಪ್ಪನವರು ಶಾಸನ ಸಭೆಗೆ ಬಂದ ತಕ್ಷಣವೇ ತಾನು ಸ್ಥಾನ ತೆರವು ಮಾಡುವುದಾಗಿ ಮೊದಲೇ

19. ದೇ. ಜವರೇಗೌಡ: ಪುಟ:138-40

ಸ್ಪಷ್ಟಪಡಿಸಿದ್ದುದ್ದಾಗಿ ಕಂಠಿ ಹೇಳಿಕೆ ನೀಡಿದರು. ಮುಂದುವರಿಸುತ್ತಾ, ತನ್ನನ್ನು ತಪ್ಪಾಗಿ ತಿಳಿದುಕೊಂಡರೂ ಪರವಾಗಿಲ್ಲ ತಾನು ಈಗಾಗಲೇ ಈ ಹೇಳಿಕೆಯನ್ನು ನೀಡಿದ್ದು ನಾನು ಈಗಲೂ ಅದಕ್ಕೆ ಬದ್ಧನಾಗಿದ್ದೇನೆ ಎಂದು ಕಂಠಿ ಹೇಳಿದರು. ತಾವು ಯಾವುದೇ ತ್ಯಾಗವನ್ನು ಮಾಡುತ್ತಿಲ್ಲ ಹಾಗೂ ತಮ್ಮ ತೀರ್ಮಾನ ನಿಜಲಿಂಗಪ್ಪನವರ ವ್ಯಕ್ತಿತ್ವ ಹಾಗೂ ನಾಯಕತ್ವ ಗುಣಗಳನ್ನು ನೋಡಿ ಸರಿಯಾದ ವ್ಯಕ್ತಿ ನಾಯಕತ್ವ ವಹಿಸಬೇಕೆಂಬ ಉದ್ದೇಶದಿಂದ ತೆರವು ಮಾಡಿದ್ದೇನೆ[20] ಎಂದರು. ಹೀಗೆ, ನಿಜಲಿಂಗಪ್ಪನವರ ಮುಖ್ಯಮಂತ್ರಿ ಸ್ಥಾನದ ಎರಡನೇ ಪರ್ವ ಆರಂಭವಾಯಿತು.

ಈಗ ನಿಜಲಿಂಗಪ್ಪನವರ ಪ್ರಯತ್ನ ರಾಜ್ಯದ ಸಮತೋಲನ ಹಾಗೂ ಶೀಘ್ರ ಆರ್ಥಿಕ ಅಭಿವೃದ್ಧಿಯ ಕಡೆ ಕೇಂದ್ರೀಕೃತವಾಗಿತ್ತು. ಹಲವಾರು ಬೃಹತ್ ನೀರಾವರಿ ಪಥಕಗಳನ್ನು ಮತ್ತು ಭೂ ಸುಧಾರಣಾ ಕ್ರಮಗಳನ್ನು ಕೈಗೆತ್ತಿಕೊಳ್ಳಲಾಯಿತು. ಈ ಸಮಯದಲ್ಲಿ ಎರಡು ಪ್ರಮುಖ ಅಂತರರಾಜ್ಯ ವಿವಾದಗಳು ಸಾಕಷ್ಟು ಗಮನವನ್ನು ಸೆಳೆದವು. ಅವುಗಳೆಂದರೆ, ಕೃಷ್ಣಾ, ಗೋದಾವರಿ ನದಿ ವಿವಾದ ಮತ್ತು ಬೆಳಗಾಂ ಸಂಬಂಧಿಸಿದಂತೆ ಮಹಾರಾಷ್ಟ್ರದೊಡನೆ ಗಡಿ ವಿವಾದ. ಈ ಎರಡೂ ವಿವಾದಗಳನ್ನು ನಿಜಲಿಂಗಪ್ಪನವರು ಬುದ್ಧಿವಂತವಾಗಿ ರಾಷ್ಟ್ರೀಯ ಹಿತಾಸಕ್ತಿಗೆ, ಧಕ್ಕೆ ಬಾರದಂತೆ ಮೈಸೂರು ರಾಜ್ಯದ ವಾದವನ್ನು ಸಮರ್ಥವಾಗಿ ಮುಂದಿಟ್ಟರು. ಕೃಷ್ಣಾ, ಗೋದಾವರಿ ನೀರಿನ ವಿವಾದಕ್ಕೆ ಸಂಬಂಧಿಸಿದಂತೆ ಮೈಸೂರು ರಾಜ್ಯದ ನಿಲುವನ್ನು ಸ್ಪಷ್ಟವಾಗಿ ವಿಧಾನ ಸಭೆಯಲ್ಲಿ ಮುಂದಿಟ್ಟರು: 'ಕೆಲಸಗಳನ್ನು ಮಾಡಲು ಒಂದು ವಿಧಾನವಿದೆ. ನಮ್ಮ ಹಿತಾಸಕ್ತಿಗಳಿಗೆ ಧಕ್ಕೆ ಬಂದರೆ, ಚಳುವಳಿ ಅವಶ್ಯಕವಾದರೆ ಅದಕ್ಕೆ ನಾವು ಹಿಂದೆ ಹೋಗುವುದಿಲ್ಲ. ಆದರೆ, ಆ ವಿಷಯವನ್ನು ಚರ್ಚಿಸಲು ಇದು ಸಮಯವಲ್ಲ. ನಮಗೆ ನ್ಯಾಯವಾಗಿ ದೊರೆಯಬೇಕಾಗಿರುವ ನೀರನ್ನು ಪಡೆದುಕೊಳ್ಳುವುದು ಈಗ ನಾನಾ ಮಟ್ಟಗಳಲ್ಲಿ ಚಳುವಳಿಯ ವಿಷಯವಾಗಿದೆ. ನಾವು, ಇಲ್ಲಿ ನಮ್ಮನ್ನು ವ್ಯಕ್ತಪಡಿಸಿಕೊಳ್ಳುತ್ತೇವೆ. ಶಾಸಕಾಂಗದಲ್ಲಿ ಮೈಸೂರಿನ ಶಾಸಕರು ಚಳುವಳಿ ಮಾಡುತ್ತಾರೆ, ಸರ್ಕಾರ ಚಳುವಳಿ ಮಾಡುತ್ತದೆ ಮತ್ತು ಖಂಡಿತವಾಗಿ ಪ್ರಜೆಗಳೂ ಚಳುವಳಿ ನಡೆಸುತ್ತಾರೆ. ಈ ವಿಷಯವು ನಮಗೆ ಬಹಳ ಮುಖ್ಯವಾದದ್ದಾಗಿದೆ, ಎಷ್ಟು ಪ್ರಮಾಣದಲ್ಲಿ ನೀರು ದೊರೆಯುತ್ತದೆ ಎಂಬುದರ ಬಗ್ಗೆ ನಿರ್ದಿಷ್ಟತೆ ಇಲ್ಲ'.[21]

ಅದೇ ಭಾಷಣದಲ್ಲಿ, ವಿಶಾಲವಾದ ರಾಷ್ಟ್ರೀಯ ಚೌಕಟ್ಟನ್ನು ಗಮನದಲ್ಲಿಟ್ಟುಕೊಂಡು ಸ್ನೇಹಪರ ಭಾವನೆಗೆ ಒತ್ತು ನೀಡಿ ಈ ರೀತಿ ಹೇಳಿದರು. "ನಾವೆಲ್ಲರೂ ಬೇರೆ ಬೇರೆ ಭಾಗಗಳಿಗೆ ಸೇರಿದವರಾದರೂ ಒಂದೇ ದೇಶಕ್ಕೆ ಸೇರಿದವರಾಗಿದ್ದೇವೆ-ಯಾರಿಗೆ ತೊಂದರೆಯಾದರೂ ಇಡೀ ದೇಶಕ್ಕೆ ತೊಂದರೆಯಾಗುತ್ತದೆ. ಈ ವಿಷಯವನ್ನು ಮನಸ್ಸಿನಲ್ಲಿಟ್ಟುಕೊಂಡು ಕೇಂದ್ರ ಸರ್ಕಾರ ಮತ್ತು ಇತರೆ ರಾಜ್ಯಗಳು ಈ ಸಮಸ್ಯೆಯನ್ನು

---

20. ಡೆಕ್ಕನ್ ಹೆರಾಲ್ಡ್ (ಬೆಂಗಳೂರು) 22 ಜೂನ್ 1962
21. ಮೈಸೂರು ವಿಧಾನ ಸಭೆ, ಚರ್ಚೆಗಳು, 1 ಏಪ್ರಿಲ್ 1963, ಪುಟ 2195

ವಿಚಾರ ಮಾಡಬೇಕು. ಯಾವ ಜನರು ಅಭಾವ ಪೀಡಿತ ಪ್ರದೇಶಗಳಲ್ಲಿ ವಾಸಿಸುತ್ತಾರೋ, ಯಾವ ಪ್ರದೇಶಗಳಲ್ಲಿ ಬೆಳೆ ಬೆಳೆಯಲು ನೀರಿನ ಅಭಾವವಿದೆಯೋ ಅಂತಹ ಜನರಿಗೆ ಈ ನೀರಿನ ಉತ್ತಮ ಅನುಕೂಲ ಪಡೆದುಕೊಳ್ಳುವಂತೆ ಮಾಡಬೇಕು."[22]

ಮಹಾರಾಷ್ಟ್ರದೊಡನೆ ಗಡಿ ವಿವಾದದ ವಿಷಯವನ್ನು ಅವರು ಮೈಸೂರು ರಾಜ್ಯದ ನಿಲುವನ್ನು ಕಾಂಗ್ರೆಸ್ ಕಾರ್ಯಕಾರಿ ಸಮಿತಿ (ಅವರು ಅದರ ಸದಸ್ಯರಾಗಿದ್ದರು) ಮತ್ತು ಕೇಂದ್ರ ಸರ್ಕಾರದ ಮುಂದೆ ಪ್ರಬಲವಾಗಿ ಮಂಡಿಸಿದರು. ಅವರ ಮನವೊಲೈಸುವ ನಿಲುವು ಗಡಿ ಸಮಸ್ಯೆಯ ಬಗ್ಗೆ ವಿಧಾನ ಸಭೆಯಲ್ಲಿ ನೀಡಿದ ಮಾತುಗಳು ಸ್ಪಷ್ಟವಾಗುತ್ತದೆ: "ಮರಾಠಿ ಭಾಷೆಯ ಜನ ಮೈಸೂರು ರಾಜ್ಯದಲ್ಲಿ ಅಥವಾ ಕನ್ನಡ ಭಾಷೆಯ ಜನ ಮಹಾರಾಷ್ಟ್ರದಲ್ಲಿ ಕೆಲವರೂ ಉಳಿಯದಂತೆ ಗಡಿಗಳನ್ನು ತೀರ್ಮಾನಿಸುವುದು ಯಾವುದೇ ಮಾನವ ಯತ್ನದಿಂದ ಸಾಧ್ಯವೇ? ಇದನ್ನು ಮಾಡಲು ಸಾಧ್ಯವಿಲ್ಲ ಇದು ಅಸಾಧ್ಯವೂ ಹೌದು ಮತ್ತು ಒಂದು ವೇಳೆ ಈ ರೀತಿ ಆಗುವುದಾದರೆ, ಅದು ಒಳ್ಳೆಯದೂ ಅಲ್ಲ. ಏಕೆಂದರೆ, ಸುಮಾರು 15-20 ಮೈಲಿಯ ಪ್ರದೇಶದಲ್ಲಿ ಜನರು ಎರಡೂ ಭಾಷೆಗಳನ್ನು ಅರ್ಥಮಾಡಿಕೊಳ್ಳುತ್ತಾರೆ. ಇದರ ಬಗ್ಗೆ ಯಾವುದೇ ತೊಂದರೆ ಇಲ್ಲ. ಇವೆಲ್ಲ ವಿಷಯಗಳನ್ನು ಈಗೇಕೆ ಕೆದಕಬೇಕು. ನಾನು ತಿಳಿದುಕೊಳ್ಳಬೇಕು. ನಮಗೆ ಭಾಷಾವಾರು ರಾಜ್ಯಗಳು ಬೇಕಿತ್ತು, ನಾವದನ್ನು ಪಡೆದಿದ್ದೇವೆ ಮತ್ತು ತೃಪ್ತಿಕರವಾಗಿ ನಡೆಸಿಕೊಂಡು ಹೋಗುತ್ತಿದ್ದೇವೆ. ಸಾಕಷ್ಟು ಅಭಿವೃದ್ಧಿ ಎಲ್ಲೆಡೇ ಕಂಡು ಬರುತ್ತಿರುವಾಗ, ಯಾವುದೇ ಒಂದು ರಾಜ್ಯದ ಶಾಸಕಾಂಗದಿಂದಲ್ಲದೇ ಇಡೀ ಭಾರತದ ಅತ್ಯಂತ ಉಚ್ಚ ಶಾಸನೀಯ ಅಧಿಕಾರ ಸ್ಥಾನವಾದ ಭಾರತ ಸಂಸದ್‌ನಿಂದ ನಿರ್ದಿಷ್ಟವಾಗಿ ತೀರ್ಮಾನವಾಗಿರುವಾಗ ಹಳೆಯ ಗಾಯಗಳನ್ನು ಮತ್ತೆ ಕೆದಕುವುದರ ಅರ್ಥವೇನು?"[23]

ಕೂಗಾಟ ಮತ್ತು ಜಗಳದ ಬದಲಾಗಿ ಮಾತುಕತೆಯ ಮೂಲಕ ಒಪ್ಪಂದಿತ ತೀರ್ಮಾನಕ್ಕೆ ಒತ್ತು ನೀಡುತ್ತಾ ನಿಜಲಿಂಗಪ್ಪನವರು ಈ ರೀತಿ ಮನವಿ ಮಾಡಿಕೊಂಡರು:[24] "ಉಭಯ ಪಕ್ಷಗಳಿಗೂ ಒಪ್ಪುವಂತಹ ನಿಯಮಗಳನ್ನು ರೂಪಿಸಲು ಸರ್ವ ಪ್ರಯತ್ನ ಮಾಡುತ್ತೇನೆಂದು ಈ ಸಭೆಗೆ ಮತ್ತು ನನ್ನ ರಾಜ್ಯದ ಜನತೆಗೆ ಆಶ್ವಾಸನೆ ನೀಡುತ್ತೇನೆ. ಇಷ್ಟು ಮಾಡಿದ ನಂತರವೂ ಹಲವು ಜನರು ನನ್ನ ಕಡೆ ರಾಜಕೀಯ ಸನ್ನೆ ಮಾಡಿ ನನ್ನ ವಿರುದ್ಧ ಮಾತನಾಡಿದ್ದಾರೆ. ನಾನಿದರ ಬಗ್ಗೆ ಹೆಚ್ಚಾಗಿ ಗಮನ ಹರಿಸಲಿಚ್ಚಿಸುವುದಿಲ್ಲವಾದರೂ, ನಾನು ರಾಜ್ಯದ ಹಿತಾಸಕ್ತಿಗೆ ಧಕ್ಕೆ ಬರುವ ಯಾವುದೇ ಕೆಲಸ ಮಾಡಿಲ್ಲವೆಂದು ಸಭೆಗೆ ಆಶ್ವಾಸನೆ ನೀಡುತ್ತೇನೆ. ನನಗೆ ಮೈಸೂರಿನ ಬಗ್ಗೆ ಎಷ್ಟು ಆಸಕ್ತಿ ಇದೆಯೋ, ಅಷ್ಟೇ ಆಸಕ್ತಿ ಮಹಾರಾಷ್ಟ್ರದ ಬಗ್ಗೆಯೂ ಇದೆ. ಏಕೆಂದರೆ ನಾವೆಲ್ಲರೂ ಒಂದೇ ದೇಶಕ್ಕೆ ಸೇರಿದವರು. ಮಹಾರಾಷ್ಟ್ರದಲ್ಲಿ ಈ ಚಳುವಳಿ ನಡೆಯುತ್ತಿರುವ ರೀತಿ ನನಗೆ ಸ್ವಲ್ಪವೂ ಒಪ್ಪುವುದಿಲ್ಲ. ಈ ಚಳುವಳಿಯಲ್ಲಿ ಸಾಮಾನ್ಯ ಪ್ರಜೆಗಳಿಗೆ ಯಾವುದೇ ಆಸಕ್ತಿ ಇಲ್ಲ. ಇದರ ಹಾಗೆ ಹಲವು ವ್ಯಕ್ತಿಗಳು ಭಾವನಾತ್ಮಕ ರೋಷವನ್ನು ಉಪಯೋಗಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾರೆ."[24]

22. ಮೈಸೂರು ವಿಧಾನ ಸಭೆ ಚರ್ಚೆಗಳು, 1 ಏಪ್ರಿಲ್ 1963 ಪುಟ:2196

23. ಮೈಸೂರು ವಿಧಾನ ಸಭೆ ಚರ್ಚೆಗಳು, 28 ಜುಲೈ 1966, ಪುಟ:476-77

1964ರಲ್ಲಿ ಪಂಡಿತ್ ನೆಹರೂ ರವರ ನಿಧನ ಹಾಗೂ ರಾಷ್ಟ್ರೀಯ ರಾಜಕಾರಣದಲ್ಲಾದ ಬದಲಾವಣೆಗಳ ನಂತರದ ಪರಿಣಾಮವಾಗಿ ನಿಜಲಿಂಗಪ್ಪನವರು ಹೆಚ್ಚು ಹೆಚ್ಚು ರಾಷ್ಟ್ರೀಯ ರಾಜಕೀಯದಲ್ಲಿ ತೊಡಗಿಸಿಕೊಳ್ಳಲಾರಂಭಿಸಿದರು. 1967ರ ನಾಲ್ಕನೇ ಸಾಮಾನ್ಯ ಚುನಾವಣೆಯ ನಂತರ ಪ್ರಧಾನಿ ಇಂದಿರಾ ಗಾಂಧಿ ಪಕ್ಷದಲ್ಲಿ ತನ್ನ ಪ್ರಾಬಲ್ಯವನ್ನು ಹೆಚ್ಚಿಸಿಕೊಳ್ಳುವ ಸಲುವಾಗಿ ಹಿರಿಯ ನಾಯಕರ ಪ್ರಭಾವ ಮತ್ತು ನಿಯಂತ್ರಣದಿಂದ ದೂರ ಸರಿಯುವ ಪ್ರಯತ್ನದಲ್ಲಿದ್ದರು. ಈ ಸಮಯದಲ್ಲಿ ಕಾಂಗ್ರೆಸ್ ಪಕ್ಷದ ಅಧ್ಯಕ್ಷ ಪದವಿಯ ಪ್ರಶ್ನೆ ಬಂದಾಗ, ಇಂದಿರಾಗಾಂಧಿ ನಿಜಲಿಂಗಪ್ಪನವರಿಗೆ ಬೆಂಬಲ ಸೂಚಿಸಲು ತೀರ್ಮಾನಿಸಿದರು. ಕಾರಣ, ಇತರ ನಾಯಕರಿಗೆ ಹೋಲಿಸಿದರೆ ಇವರು ಇಂದಿರಾ ಗಾಂಧಿಯವರಿಗೆ ಕಡಿಮೆ ತೊಂದರೆ ಉಂಟುಮಾಡುವವರೆಂದು ಗ್ರಹಿಸಿದರು. ಇದರ ಬಗ್ಗೆ ಡಾ:ಜವರೇಗೌಡ ಈ ರೀತಿ ಹೇಳುತ್ತಾರೆ.[25] 1967ರಲ್ಲಿ ಎರಡನೇ ಬಾರಿಗೆ ಇಂದಿರಾ ಗಾಂಧಿ ಪ್ರಧಾನಿಯಾಗಿ ಆಯ್ಕೆಗೊಂಡ ನಂತರ ಕಾಂಗ್ರೆಸ್ಸಿನ ಹಳೆಯ ಹುಲಿಗಳನ್ನು ತಮ್ಮ ಹದ್ದಿನಲ್ಲಿಟ್ಟುಕೊಳ್ಳಲು ಪ್ರಯತ್ನಿಸುತ್ತಾರೆ. ಹಳಬರ ಹಾಡಿಗೆ ಹೆಜ್ಜೆ ಹಾಕುವ ಹೆಣ್ಣಲ್ಲವಷ್ಟೇ ಇಂದಿರಾ. ಕಾಮರಾಜ್ ನಾಡರ್ ಅವರ ಕಾಂಗ್ರೆಸ್ ಅಧ್ಯಕ್ಷ ಪದವಿಯನ್ನು ವಹಿಸಿಕೊಳ್ಳಲು ಅವರು ತವಕಿಸುತ್ತಾರೆ. ಲೋಕಸಭೆಯಲ್ಲಿ ತಮ್ಮ ಪಕ್ಷಕ್ಕೆ ಸಂಕಷ್ಟ ಬಹುಮತವಿಲ್ಲವಾದ್ದರಿಂದ, ಇನ್ನೂ ಅಲ್ಲಲ್ಲಿ ಹಳಬರ ಪ್ರಭಾವ ನಡೆಯುತ್ತಿದ್ದುದರಿಂದ, ಅನುಕೂಲ ಸಮಯಕ್ಕಾಗಿ ಕಾಯುವುದೆಂದು ಅವರು ನಿಶ್ಚಯಿಸಿಕೊಳ್ಳುತ್ತಾರೆ. ಎಸ್.ಕೆ.ಪಾಟೀಲ್, ನಂದಾರಿಗಿಂತ ನಗುಮುಖದ, ಸೌಜನ್ಯ ಸ್ವಭಾವದ ನಿಜಲಿಂಗಪ್ಪನವರಿಂದ ತಮ್ಮ ಸರ್ವಾಧಿಕಾರ ಪ್ರವೃತ್ತಿಗೆ ಭಂಗ ಬರಲಾರದೆಂದು ತಿಳಿದು ಅವರ ಪರವಾಗಿ ವಾಲುತ್ತಾರೆ.'

ನಿಜಲಿಂಗಪ್ಪನವರು ಮೈಸೂರಿನ ಮುಖ್ಯ ಮಂತ್ರಿಯಾಗಿರುವಾಗಲೇ ಡಿಸೆಂಬರ್ 7, 1957ರಲ್ಲಿ ಕಾಂಗ್ರೆಸ್ ಪಕ್ಷದ ಅಧ್ಯಕ್ಷರಾಗಿ ಕರ್ತವ್ಯ ವಹಿಸಿಕೊಂಡರು. ಅವರ ಸಾಕಷ್ಟು ಸಮಯ ಮತ್ತು ಶಕ್ತಿಯನ್ನು ಪಕ್ಷದ ಸಂಘಟನೆಯ ವಿಷಯಗಳಿಗೆ ವ್ಯಯ ಮಾಡಬೇಕಾಗಿ ಬಂದರೂ, ತಮ್ಮ ಮುಖ್ಯಮಂತ್ರಿ ಸ್ಥಾನದ ಜವಾಬ್ದಾರಿಯನ್ನು ಮರೆಯಲಿಲ್ಲ. ವಿರೋಧ ಪಕ್ಷದವರು ನಿಜಲಿಂಗಪ್ಪನವರು ಎರಡೂ ಪಾತ್ರಗಳಿಗೆ ನ್ಯಾಯ ಒದಗಿಸಬಲ್ಲರೇ ಎಂಬ ವಿಷಯವಾಗಿ ಅನುಮಾನ ವ್ಯಕ್ತಪಡಿಸಿದರು. ಮುಖ್ಯಮಂತ್ರಿ ಸ್ಥಾನದಲ್ಲಿ ಮತ್ತು ಕಾಂಗ್ರೆಸ್ ಅಧ್ಯಕ್ಷನಾಗಿ ಏಕ ಕಾಲದಲ್ಲಿ ಮುಂದುವರಿಯುವ ತೀರ್ಮಾನವನ್ನು ಸಮರ್ಥಿಸಿಕೊಳ್ಳುತ್ತಾ, ಮೈಸೂರು ವಿಧಾನ ಸಭೆಯಲ್ಲಿ ಈ ರೀತಿ ಹೇಳಿದರು. "ಈ ದಿನ ಬಂದಿರತಕ್ಕ ಪ್ರಶ್ನೆ ನಾನು ಅಖಿಲ ಭಾರತದ ಕಾಂಗ್ರೆಸ್ ಅಧ್ಯಕ್ಷನಾಗಿ ಮುಖ್ಯ ಮಂತ್ರಿಯ ಕೆಲಸವನ್ನು ಮಾಡಲಿಕ್ಕಾಗುವುದಿಲ್ಲ ಎಂದು. ಏಕಕಾಲದಲ್ಲಿ ಎರಡು ಕೆಲಸಗಳನ್ನು ಮಾಡುವುದಕ್ಕಾಗುವುದಿಲ್ಲವೆಂದು ಕೆಲವು ಸದಸ್ಯರುಗಳು ಹೇಳುತ್ತಿದ್ದಾರೆ. ಎರಡು ಕೆಲಸಗಳನ್ನು ಮಾಡಲು ಕಾನೂನು ಪ್ರಕಾರ ಯಾವುದೇ ರೀತಿಯ ಪ್ರತಿಬಂಧಕವೂ ಇಲ್ಲವೆಂದು ಹೇಳುವುದಕ್ಕೆ ಇಷ್ಟಪಡುತ್ತಾನೆ ಎಂದು ಕೆಲಸಗಳನ್ನು ಮಾಡುವುದಕ್ಕೆ ಕಾನೂನು ಪ್ರಕಾರ ಅವಕಾಶವಿದೆ' ಎರಡನ್ನೂ ಮುಂದುವರಿಸಿಕೊಂಡು ಹೋಗಬೇಕೇ ಅಥವಾ ಒಂದನ್ನು

25. ದೇ.ಜವರೇಗೌಡ:ಪುಟ:148

ಬಿಡಬೇಕೇ, ಬಿಡುವುದಾದರೆ ಯಾವುದನ್ನು ಬಿಡಬೇಕು ಎನ್ನುವ ವಿಷಯದ ಬಗ್ಗೆ ನನ್ನ ಪಕ್ಷದವರನ್ನು ಕೇಳಿ ತೀರ್ಮಾನ ಮಾಡಬೇಕು."[26]

ಮೇ, 1968ರಲ್ಲಿ ನಿಜಲಿಂಗಪ್ಪನವರು ಕಾಂಗ್ರೆಸ್ ಪಕ್ಷದ ಅಧ್ಯಕ್ಷರಾಗಿ ಹೆಚ್ಚು ಸಮಯವನ್ನು ಪಕ್ಷಕ್ಕೆ ನೀಡುವ ಸಲುವಾಗಿ ಮೈಸೂರು ಮುಖ್ಯ ಮಂತ್ರಿಯ ಸ್ಥಾನವನ್ನು ತೆರವು ಮಾಡಿದರು. ಆಗ ರಾಷ್ಟ್ರೀಯ ಮಟ್ಟದಲ್ಲಿ ಕಾಂಗ್ರೆಸ್ ರಾಜಕೀಯದಲ್ಲಿ ಭಾರಿ ಬೆಳವಣಿಗೆಗಳು ಕಂಡು ಬರುತ್ತಿದ್ದವು. ಅಧಿಕಾರಕ್ಕಾಗಿ ಹೋರಾಟ ಮತ್ತು ಕಾಂಗ್ರೆಸ್ಸಿನ ಹಳೆಯ ತಲೆಗಳ ಮತ್ತು ಪ್ರಧಾನ ಮಂತ್ರಿ ಇಂದಿರಾ ಗಾಂಧಿಯವರ ನಡುವೆ ಬಿನ್ನಾಭಿಪ್ರಾಯ ತೀವ್ರವಾಗ ತೊಡಗಿತು. ಕಾಂಗ್ರೆಸ್ಸಿನ ಹಳಬರು (ನಿಜಲಿಂಗಪ್ಪನವರನ್ನು ಸೇರಿಸಿಕೊಂಡು) ಇಂದಿರಾ ಗಾಂಧಿ ತಮ್ಮನ್ನು ಪಕ್ಕಕ್ಕೆ ತಳ್ಳುವ ಹಾಗೂ ಅವರ "ನಿಷ್ಠಾವಂತರಿಗೆ" ಸರ್ಕಾರದಲ್ಲಿ ಪ್ರಾಮುಖ್ಯತೆ ನೀಡುತ್ತಿದ್ದಾರೆ ಎಂದು ಅಭಿಪ್ರಾಯ ಪಟ್ಟರೆ, ಮತ್ತೊಂದು ಕಡೆ ಇಂದಿರಾ ಗಾಂಧಿಯವರು ಹಳಬರು ಇಂದಿನ ರಾಜಕೀಯ ವಾಸ್ತವಿಕತೆಯ ಜೊತೆ ಸಂಬಂಧ ಕಳೆದುಕೊಂಡಿದ್ದಾರೆ ಹಾಗೂ ಅವರ ರಾಜಕೀಯ ತಳಹದಿ ಅಲುಗಾಡುತ್ತಿದೆ ಎಂದು ಅಭಿಪ್ರಾಯಪಟ್ಟಿದ್ದರು. ಇಂದಿರಾ ಗಾಂಧಿ ಪಕ್ಷದೊಳಗಡೆ ಹಾಗೂ ಸರ್ಕಾರದಲ್ಲಿ ತನ್ನ ಸ್ಥಾನವನ್ನು ದೃಢ ಪಡಿಸುವ ಪ್ರಯತ್ನಕ್ಕೆ ಹಳಬರು ಅಡ್ಡಗಲ್ಲಾಗಿದ್ದಾರೆ ಎಂದು ಭಾವಿಸಿದ್ದರು. ಪಕ್ಷದ ಅಧ್ಯಕ್ಷರಾದ ನಿಜಲಿಂಗಪ್ಪನವರ ಹಾಗೂ ಸರಕಾರ ಮುಖಂಡರಾಗಿದ್ದ ಇಂದಿರಾ ಗಾಂಧಿಯವರ ನಡುವಿನ ಬಿರುಕು ಸ್ಪಷ್ಟವಾಗಿ ಕಾಣತೊಡಗಿತು.

ನಿಜಲಿಂಗಪ್ಪನವರನ್ನು ಈಗ ಕಾಂಗ್ರೆಸ್‌ನ ಸಿಂಡಿಕೇಟ್'ನ ಭಾಗವಾಗಿ ಪರಿಗಣಿಸಲಾಯಿತು. ಸಿಂಡಿಕೇಟ್‌ನ ಇತರ ಸದಸ್ಯರೆಂದರೆ ಶ್ರೀ ಕಾಮರಾಜ್, ಶ್ರೀ ಎಸ್. ಕೆ. ಪಾಟೀಲ್, ಶ್ರೀ ಅತುಲ್ಯಘೋಷ್. ಈ ಬೆಳವಣಿಗೆಗಳನ್ನು ಕುರಿತು ದೇ. ಜವರೇಗೌಡ ಈ ರೀತಿ ಹೇಳುತ್ತಾರೆ. 'ನಿಜಲಿಂಗಪ್ಪನವರು ಅಧ್ಯಕ್ಷರಾದ ಏಳೆಂಟು ತಿಂಗಳಲ್ಲಿಯೇ ಅವರ ಮತ್ತು ಪ್ರಧಾನಿಗಳ ನಡುವೆ ಬಿನ್ನಾಭಿಪ್ರಾಯ ಕಾಣಿಸಿಕೊಂಡು ದಿನೇ ದಿನೇ ಉಲ್ಬಣಿಸುತ್ತಿದೆ. ಈ ಉಲ್ಬಣಕ್ಕೆ ಎರಡು ಕಡೆಯೂ ಸಾಕಷ್ಟು ಕಾರಣವಿದೆಯೆಂದು ತೋರುತ್ತದೆ. ವಯಸ್ಸಿನಿಂದ ಅನುಭವದಿಂದ ತಾವು ಜೇಷ್ಠರಾಗಿದ್ದರೂ, ಪ್ರಧಾನಿ ತಮ್ಮ ಮಾತಿಗೆ ಬೆಲೆ ಕೊಡುತ್ತಿಲ್ಲವೆಂದೂ, ತಮ್ಮ ಮಹತ್ವಾಕಾಂಕ್ಷೆಯ ಪೂರೈಕೆಗಾಗಿ ಅನುಭವವಿಲ್ಲದ ದಿನೇಶ ಸಿಂಗ್ ರಂಥ ಕಿರಿಯರನ್ನು ಕಟ್ಟಿಕೊಂಡು ದೇಶವನ್ನು ದಿವಾಳಿ ಮಾಡುತ್ತಿರುವರು".[27]

ಶ್ರೀಮತಿ ಇಂದಿರಾ ಗಾಂಧಿಯವರ ಬೆಂಬಲಿಗರ ಪ್ರಕಾರ, 1969ರಲ್ಲಿ ನಡೆದ 72ನೇ ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಸಭೆಯಲ್ಲಿ ಕಾಂಗ್ರೆಸ್ ಪಕ್ಷದ ಅಧ್ಯಕ್ಷರಾಗಿ, ನಿಜಲಿಂಗಪ್ಪನವರು ಸರ್ಕಾರದ ಹಲವು ನೀತಿಗಳನ್ನು ಸಾರ್ವಜನಿಕವಾಗಿ ವಿಮರ್ಶಿಸಿ ಪಕ್ಷದ ಅಧ್ಯಕ್ಷ ಮತ್ತು ಪ್ರಧಾನ ಮಂತ್ರಿಯ ನಡುವಿನ ವಿರಸವನ್ನು ಬಹಿರಂಗಪಡಿಸಿದರು.

---

26. ಮೈಸೂರು ವಿಧಾನಸಭೆ, ಚರ್ಚೆಗಳು, 21 ಫೆಬ್ರವರಿ 1968, ಪುಟ:118

27. ದೇ. ಜವರೇಗೌಡ:ಪುಟ 259

ಭಾರತದ ರಾಷ್ಟ್ರಪತಿ ಸ್ಥಾನಕ್ಕೆ ಅಭ್ಯರ್ಥಿಯನ್ನು ಆಯ್ಕೆ ಮಾಡುವ ವಿಷಯದಲ್ಲಿ ಈ ವಿವಾದವು ಉಲ್ಬಣಗೊಂಡಿತ್ತು. ಜುಲೈ 1969ರಲ್ಲಿ ಬೆಂಗಳೂರಿನಲ್ಲಿ ನಡೆದ ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಸಭೆಯಲ್ಲಿ 'ಸಿಂಡಿಕೇಟ್' ಮತ್ತು ಶ್ರೀಮತಿ ಇಂದಿರಾ ಗಾಂಧಿಯವರ ನಡುವಿನ ತಿಕ್ಕಾಟ ಹೊರ ಬಿದ್ದಿತು. ಜುಲೈ 12ರಂದು ನಿಜಲಿಂಗಪ್ಪನವರ ಅಧ್ಯಕ್ಷತೆಯಲ್ಲಿ ಕಾಂಗ್ರೆಸ್ ಸಂಸದೀಯ ಮಂಡಳಿಯು ಶ್ರೀ. ನೀಲಂ ಸಂಜೀವರೆಡ್ಡಿಯವರನ್ನು ಪಕ್ಷದ ಅಭ್ಯರ್ಥಿಯಾಗಿ ರಾಷ್ಟ್ರಪತಿ ಚುನಾವಣೆಗೆ ನೇಮಕ ಮಾಡಿದರು. ಶ್ರೀಮತಿ ಇಂದಿರಾ ಗಾಂಧಿಯವರು ಬೆಂಬಲವನ್ನು ಸೂಚಿಸಿದ್ದರ ಪರಿಣಾಮವಾಗಿ (ಪ್ರಭಾರ) ರಾಷ್ಟ್ರಪತಿ ವಿ.ವಿ.ಗಿರಿ ಸ್ವತಂತ್ರ ಅಭ್ಯರ್ಥಿಯಾಗಿ ತಮ್ಮ ಹೆಸರನ್ನು ಘೋಷಿಸಿದರು. ಶ್ರೀಮತಿ ಗಾಂಧಿ ಪಕ್ಷದವರಿಗೆ ತಮ್ಮ ಮನಃ ಸಾಕ್ಷಿಗೆ ಸರಿ ಎನ್ನಿಸುವಂತೆ ಮತನೀಡಲು ಕರೆ ಕೊಟ್ಟರು. ಆ ಚುನಾವಣೆಯಲ್ಲಿ ವಿ.ವಿ.ಗಿರಿ, ನೀಲಂ ಸಂಜೀವರೆಡ್ಡಿಯವರ ವಿರುದ್ಧ ಜಯ ಸಾಧಿಸಿದರು. ನವಂಬರ್ 1969ರೊಳಗೆ ಕಾಂಗ್ರೆಸ್ ಪಕ್ಷ ಎರಡು ಬಣಗಳಾಗಿ ಒಡೆದು, ಒಂದು ಬಣ ಇನ್ನೊಂದು ಬಣವನ್ನು ಪಕ್ಷದಿಂದ ಹೊರಹಾಕುವ ಕಾರ್ಯಕ್ಕಿಳಿದಿತ್ತು. ನಿಜಲಿಂಗಪ್ಪನರ ನಾಯಕತ್ವದ ಕಾಂಗ್ರೆಸ್ ಗುಂಪನ್ನು ಕಾಂಗ್ರೆಸ್ (ಸಂಘಟನೆ) ಮತ್ತು ಇಂದಿರಾ ಗಾಂಧಿಯವರ ಗುಂಪನ್ನು ಕಾಂಗ್ರೆಸ್ (ಆಡಳಿತ) ಎಂದು ಕರೆಯಲಾಯಿತು.

1974ರಲ್ಲಿ ನಿಜಲಿಂಗಪ್ಪನವರು ಕಾಂಗ್ರೆಸ್ (ಸಂಘಟನೆ) ಅಧ್ಯಕ್ಷ ಸ್ಥಾನವನ್ನು ತ್ಯಜಿಸಿ ಸಕ್ರಿಯ ರಾಜಕೀಯದಿಂದ ನಿವೃತ್ತಿ ಹೊಂದಿದರು. ನಿವೃತ್ತಿ ನಂತರವೂ ಸಾರ್ವಜನಿಕ ವಿಷಯಗಳಲ್ಲಿ ಸಂಬಂಧಪಟ್ಟ ಅಧಿಕಾರಿಗಳ ಗಮನ ಸೆಳೆಯುವಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದರು. ಆಂತರಿಕ ತುರ್ತು ಪರಿಸ್ಥಿತಿಯ ಪರಿಣಾಮ ಹಾಗೂ ಆ ಸಮಯದಲ್ಲಿ ಹೊರಬಂದು ಪ್ರಜಾಪ್ರಭುತ್ವ ವಿರೋಧಿ ಶಕ್ತಿಗಳ ಕುರಿತು ನಿಜಲಿಂಗಪ್ಪನವರು ತಮ್ಮ ದಿನಚರಿಯಲ್ಲಿ ಈ ರೀತಿ ಹೇಳಿದ್ದಾರೆ. 'ನನ್ನ ರಾಷ್ಟ್ರ, ನನ್ನ ಇಂಡಿಯಾ ಜಗತ್ತಿನಲ್ಲಿಯೇ ದೊಡ್ಡ ಪ್ರಜಾಪ್ರಭುತ್ವದ ನೆಲೆಯೆನಿಸಿಕೊಂಡಿರುವ ಈ ನನ್ನ ಮಾತೃ ಭೂಮಿ, ಇಂದು ದೊಡ್ಡ ಸೆರೆಮನೆಯಾಗಿದೆ. ಇಂದಿರಾ ಗಾಂಧಿಯವರ ಸ್ವಾರ್ಥತಾ ಮೂಲದ ಮಹತ್ವಾಕಾಂಕ್ಷೆಗೆ ನಾವೆಲ್ಲರೂ ಬಂಧಿಗಳಾಗಿದ್ದೇವೆ. ನೀತಿ ನಯವಿಲ್ಲದ, ಅನುಭವವಿಲ್ಲದ, ಸದಾ ದುರ್ಜನರ ಸಹವಾಸದಲ್ಲಿರುವ ತಮ್ಮ ಮಗನನ್ನು ತಮ್ಮ ಉತ್ತರಾಧಿಕಾರಿಯನ್ನಾಗಿ ಮಾಡಲು ಅಮ್ಮ ಸಕಲ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಿದ್ದಾರೆ:"[28] 1977ರಲ್ಲಿ ಜನತಾ ಪಕ್ಷ ಸಾಧಿಸಿದ ವಿಜಯವನ್ನು ನಿಜಲಿಂಗಪ್ಪನವರು ಪ್ರಜಾಪ್ರಭುತ್ವದ ಜಯ ಎಂದು ಪ್ರಶಂಸಿಸಿದರು. ಜನತಾ ಪಕ್ಷದ ಸ್ಥಾನವನ್ನು ಅಲಂಕರಿಸಲು ನಿರಾಕರಿಸಿದ ನಿಜಲಿಂಗಪ್ಪನವರು ಸಲಹಾಗಾರ ಹಾಗೂ ಹಿರಿಯ ನಾಯಕರಂತೆ ಇರಲು ಇಚ್ಛಿಸಿದರು.

ರಾಜಕೀಯದಿಂದ ನಿವೃತ್ತಿ ಪಡೆದ ನಂತರ ನಿಜಲಿಂಗಪ್ಪನವರು ನಿರಂತರವಾಗಿ ಅನ್ಯಾಯ ಭ್ರಷ್ಟಾಚಾರ ಹಾಗೂ ಪ್ರಜಾಪ್ರಭುತ್ವದ ತತ್ವಗಳ ಉಲ್ಲಂಘನೆಯ ವಿರುದ್ಧ ಧ್ವನಿ ಎತ್ತುತ್ತಿದ್ದರು. ಎಲ್ಲ ರಾಜಕೀಯ ಪಕ್ಷದವರೂ ಅವರನ್ನು ಭೇಟಿಮಾಡಿ ಅವರ ಸಲಹೆ ಹಾಗೂ ಆಶೀರ್ವಾದಗಳನ್ನು ಪಡೆಯಲು ಬರುತ್ತಿದ್ದರು.

---

28. ದೇ. ಜವರೇಗೌಡ : ಪುಟ: 277

ಭಾರತದ ನಿಯೋಜಕ ಸಭೆಗೆ 50 ವರ್ಷ ತುಂಬಿದ ಸಂದರ್ಭದಲ್ಲಿ ಡಿಸೆಂಬರ್ 9, 1996ರಂದು ನಿಜಲಿಂಗಪ್ಪನವರನ್ನು ಭಾರತ ರಾಷ್ಟ್ರಪತಿಗಳು ಸನ್ಮಾನಿಸಿದರು. ಮೊಟ್ಟ ಮೊದಲ ನಿಯೋಜಕ ಸಭೆ ರಚನೆಯಾದ ಕಾಲದಿಂದಲೂ ಜೀವಂತವಾಗಿ ಉಳಿದ ಸದಸ್ಯರಲ್ಲಿ ನಿಜಲಿಂಗಪ್ಪನವರೂ ಒಬ್ಬರು. ಇತ್ತೀಚೆಗೆ 10ನೇ ಡಿಸೆಂಬರ್ 1998ರಲ್ಲಿ ಅವರ ಬೆಂಬಲಿಗರು ಬೆಂಗಳೂರಿನಲ್ಲಿ ಅವರ 97ನೇ ಹುಟ್ಟು ಹಬ್ಬದ ಸಂದರ್ಭದಲ್ಲಿ ಒಂದು ಸಮಾರಂಭವನ್ನು ಏರ್ಪಡಿಸಿದ್ದರು.

ಸಾಮಾನ್ಯವಾಗಿ ಭಾರತದ ರಾಜಕಾರಣಕ್ಕೆ ಹಾಗೂ ಪ್ರತ್ಯೇಕವಾಗಿ ಕರ್ನಾಟಕಕ್ಕೆ ನಿಜಲಿಂಗಪ್ಪನವರ ಕೊಡುಗೆಯನ್ನು ಮುಂದಿನ ತಲೆಮಾರುಗಳು ಸ್ಮರಿಸುತ್ತಾರೆ ಹಾಗೂ ಜ್ಞಾಪಿಸಿಕೊಳ್ಳುತ್ತಾರೆ. ಕನ್ನಡ ಭಾಷೆ ಮಾತನಾಡುವ ಜನರನ್ನು ಒಂದುಗೂಡಿಸಿದ್ದು ಮತ್ತು ನವ ಕರ್ನಾಟಕವನ್ನು ನಿರ್ಮಾಣ ಮಾಡಿದ್ದರಲ್ಲಿ ನಿಜಲಿಂಗಪ್ಪನವರ ಎಲ್ಲ ಸಾಧನೆಗಳಿಗಿಂತ ಅತ್ಯಂತ ಅಪೂರ್ವ ಮತ್ತು ಅಮೋಘ ಸಾಧನೆಯಾಗಿ ಉಳಿಯುತ್ತದೆ.

**ಭಾಗ - 2**

**ಲೋಕಸಭೆ**

| | | |
|---|---|---|
| 1. | ರಾಜ್ಯ ಪುನರ್‌ರಚನೆ ಆಯೋಗ ವರದಿ - - | (15 ಡಿಸೆಂಬರ್ 1955) |
| 2. | ಆಂಧ್ರ ರಾಜ್ಯ ಮಸೂದೆ - - | (3 ಆಗಸ್ಟ್ 1953) |
| 3. | ಪಂಚವಾರ್ಷಿಕ ಯೋಜನೆಗಳು - - | (18 ಡಿಸೆಂಬರ್ 1952) |
| 4. | ರೈಲ್ವೆ ಮುಂಗಡ ಪತ್ರ - - | (2 ಮಾರ್ಚ್ 1954) |

## ಭಾಗ -2
## ಲೋಕ ಸಭೆ

### ಜಗಳ ರಾಜ್ಯ ಪುನರ್ ರಚನೆ ಆಯೋಗದ ವರದಿಯ ಮೇಲಿನ ಚರ್ಚೆ

ಕರ್ನಾಟಕ ಪರವಾಗಿ ಮಾತನಾಡಲು ನನ್ನ ಹೆಸರನ್ನು ಸಲಹೆ ಮಾಡಿದ ಹಲವಾರು ಸದಸ್ಯರಿಗೆ ನಾನು ಅಭಾರಿಯಾಗಿದ್ದೇನೆ. ಕರ್ನಾಟಕ ರಾಜ್ಯದಲ್ಲಿ ನಿರ್ಮಾಣ ಕಾರ್ಯಕ್ಕೆ ಭಾವೋದ್ದೀಸ್ತತೆಯಿಂದ ಕೆಲಸ ಮಾಡುತ್ತಿರುವವರಲ್ಲಿ ನಾನು ಒಬ್ಬನೆಂಬುದನ್ನು ಅಲ್ಲಗಳೆಯಲಾಗದು. ಅಂದ ಮಾತ್ರಕ್ಕೆ ನನಗೆ ಬೇರೆ ರಾಜ್ಯಗಳ ನಿರ್ಮಾಣದಲ್ಲಿ ಕಾತುರತೆ ಇಲ್ಲವೆಂದಾಗಲೀ ಆಸಕ್ತಿ ಕಡಿಮೆಯೊಂದಾಗಲೀ ಅರ್ಥವಲ್ಲ. ಕರ್ನಾಟಕ ರಾಜ್ಯದ ವಿಷಯಕ್ಕೆ ಬರುವ ಮುನ್ನ ನಾನು ಎಸ್. ಆರ್. ಸಿ. ವರದಿಗೆ, ಹಲವು ಮಾರ್ಪಾಡುಗಳೊಡನೆ, ಹೃದಯಪೂರ್ವಕ ಸ್ವಾಗತವನ್ನು, ನನ್ನ ಪ್ರಸ್ತಾವನೆಯಲ್ಲಿ ಕೋರುತ್ತೇನೆ. ಅವರು ಆ ಬಗ್ಗೆ ಅತ್ಯುತ್ತಮ ಕಾರ್ಯವನ್ನು ಮಾಡಿದ್ದಾರೆಂದು ಭಾವಿಸುತ್ತೇನೆ. ಅವರಿಗೆ ವಹಿಸಿದ್ದ ಸಮಸ್ಯೆ ಕಷ್ಟತಮವಾದದ್ದು ಮಾತ್ರವಲ್ಲ, ಅಷ್ಟೇ ಸೂಕ್ಷ್ಮವಾದುದಾಗಿತ್ತು. ಅವರು ಎಲ್ಲಾ ವಿಭಾಗದವರಿಗೂ ಸಂತೃಪ್ತಿಯಾಗುವ ಮಟ್ಟದಲ್ಲಿ ಕಾರ್ಯನಿರ್ವಹಿಸಿದ್ದಕ್ಕಾಗಿ ಅವರಿಗೆ ನಮ್ಮ ಕೃತಜ್ಞತೆಗಳು ಮತ್ತು ಅವರ ಹೆಸರುಗಳು ಚರಿತ್ರೆಯಲ್ಲಿ ಶಾಶ್ವತವಾಗಿರುತ್ತವೆ ಎಂದು ನಾನು ಹೇಳುವಾಗ ಈ ಸದನದ ಅಭಿಪ್ರಾಯವನ್ನು ಸೂಚಿಸುತ್ತಿದ್ದೇನೆಂದು ಭಾವಿಸುತ್ತೇನೆ.

ಈ ರೀತಿ ಹೇಳುವಾಗ, ನಾನು ಒಂದು ಪ್ರಮುಖವಾದ ಶಿಫಾರಸಿನ ಬಗ್ಗೆ ನಿರ್ದಿಷ್ಟವಾಗಿ ಹೇಳಬಯಸುತ್ತೇನೆ. ಅವರು ರಾಜ ಪ್ರಮುಖರ ಪೂರ್ಣ ರದ್ದು ಮಾಡುವ ಬಗ್ಗೆ ಶಿಫಾರಸ್ಸು ಮಾಡಿದ್ದಾರೆ. ಈ ಒಂದು ತೀರ್ಮಾನವು ಚರಿತ್ರೆಯಲ್ಲಿ ಯುಗ ಯುಗಗಳವರೆಗೆ ಒಂದು ಅತ್ಯಂತ ಪ್ರಮುಖ ತೀರ್ಮಾನವಾಗಿ ದಾಖಲಾಗುತ್ತದೆ. 1952 ರಿಂದ ಭಾಗ ಬಿ, ಭಾಗ ಸಿ, ಭಾಗ ಡಿ, ರಾಜ್ಯಗಳ ಲೋಕಸಭಾ ಸದಸ್ಯರ ಸಂಘದ ಅಧ್ಯಕ್ಷನಾಗಿ, ನಮ್ಮ ಬೇಡಿಕೆ, ಮೊದಲನೆಯದಾಗಿ ಒಂದು ರಾಜ್ಯದಿಂದ ಮತ್ತೊಂದು ರಾಜ್ಯಕ್ಕೆ ಯಾವುದೇ ವ್ಯತ್ಯಾಸ ವಿರಬಾರದೆಂದೂ, ಮತ್ತು ಭಾಗ ಎ, ಭಾಗ ಬಿ, ಮತ್ತು ಭಾಗ ಸಿ ರಾಜ್ಯಗಳ ನಡುವಣ ವ್ಯತ್ಯಾಸಗಳು ಒಮ್ಮೆಗೇ ಪೂರ್ಣವಾಗಿ ಇಲ್ಲದಂತಾಗಬೇಕೆಂದೂ ಆಗಿತ್ತು. ಆ ಕಾರ್ಯ ಮಾಡಲಾಗಿದೆ. ನಮ್ಮ ಮತ್ತೊಂದು ಬೇಡಿಕೆ ರಾಜ್ಯ ಪ್ರಮುಖರ ಸ್ಥಾನ ಸಂವಿಧಾನದಲ್ಲಿ ಮತ್ತು ಪ್ರಜಾಪ್ರಭುತ್ವದಲ್ಲಿ ಸರಿಹೊಂದುವುದಿಲ್ಲವೆಂದೂ ಆಗಿತ್ತು, ಅದು ಸಹ ಒಪ್ಪಿಕೊಳ್ಳಲಾಗಿದೆ. ಈ ಪರಿಗಣನೆಯನ್ನು ಮುಂದೊಡಬೇಕೆಂದು ಯಾರೂ ತೀವ್ರವಾಗಿ ಆಲೋಚಿಸುತ್ತಿಲ್ಲವೆಂದು ನನಗೆ ಖಾತ್ರಿ ಇದೆ. ಹಾಗೆ ಮಾಡುವುದು ತರ್ಕ ವಿರುದ್ಧ ಅವಿವೇಕಯುತ ಮತ್ತು ಅಸಮಂಜಸ. ನಾವು ಬಹುದೂರ ಈ ದಿಶೆಯಲ್ಲಿ ಸಾಗಿದ್ದು, ಈ ಸಮಸ್ಯೆಯನ್ನು ಪೂರ್ಣವಾಗಿ ಪರಿಹಾರ ಮಾಡಲು ಕಾಲ ಸನ್ನಿಹಿತವಾಗಿದೆ ಎಂದು ಭಾವಿಸುತ್ತೇನೆ.

---

ಲೋಕಸಭೆ ನಡವಳಿಕೆ: ದಿನಾಂಕ 15-12-1955 ಪುಟ 2792-812

ಸಾಮಾನ್ಯವಾಗಿ ಹೇಳುವುದಾದರೆ ಒಂದು ರಾಜ್ಯಕ್ಕೆ ಒಂದೂ ಭಾಷೆಯಿರುವುದು ಒಳ್ಳೆಯದು ಎಂಬುದು ನನ್ನ ಭಾವನೆ. ಆದರೆ ಒಂದೇ ಭಾಷೆ ಇದ್ದರೂ, ಬಹಳ ದೊಡ್ಡದಾದ ರಾಜ್ಯಗಳಿರುವ ಬಗ್ಗೆ ಸಹ ನಾವು ಗಮನಿಸಬೇಕು, ಉತ್ತರ ಪ್ರದೇಶದ ಬಗ್ಗೆ ಡಾ. ಫಣಿಕ್ಕರ್ ರವರ ಅಸಮ್ಮತಿಯನ್ನು ಟಿಪ್ಪಣಿಯನ್ನು ಓದಿದ್ದೇನೆ. ನೂತನ ಮಧ್ಯ ಪ್ರದೇಶದ ಬಗ್ಗೆ ಹೇಳುವುದಾದರೆ, ಅದನ್ನು ನಿರ್ಮಾಣ ಮಾಡಬಹುದೆಂದು ನನಗನ್ನಿಸುತ್ತದೆ, ಸಂವಿಧಾನದ ವ್ಯವಸ್ಥೆಯನ್ನು ಗಮನಿಸಿದ್ದಲ್ಲಿ ಉತ್ತರ ಪ್ರದೇಶದಂತಹ ದೊಡ್ಡ ರಾಜ್ಯದ ಅಸ್ತಿತ್ವ ದೇಶದ ಒಳಿತಿಗಾಗಿಯೇ ಎಂಬ ಅನುಮಾನ ನನ್ನಲ್ಲಿ ಮೂಡುತ್ತದೆ. ಒಂದು ವಸ್ತುವಿನ ಬಗ್ಗ ಅಥವಾ ಕೆಲವು ನಿರ್ದಿಷ್ಟ ವ್ಯಕ್ತಿಗಳ ಬಗ್ಗೆ, ನಮ್ಮ ಭಾವನೆಗಲು ಏನೇ ಇದ್ದರೂ, ನಾವು ಯಾವುದೇ ಕಾರಣದಿಂದ ವರ್ತಮಾನ ಕಾಲವು ಭವಿಷ್ಯತ್ತನ್ನು ಪೂರ್ವಗ್ರಹ ಪೀಡಿತವನ್ನಾಗಿಸಬಾರದು, ಆದ್ದರಿಂದ ಹಿಂದಿ ಭಾಷೆಯನ್ನಾಡುವ ಪ್ರದೇಶಗಳು ಸಾಧ್ಯವಾದಲ್ಲಿ ಒಂದು ಸರಿಯಾದ ಮತ್ತು ಹೆಚ್ಚು ವಿವೇಕಯುತವಾದ ವ್ಯವಸ್ಥೆಯನ್ನು ಹೊಂದುವುದು ಒಳ್ಳೆಯದು.

ಕರ್ನಾಟಕದ ಬಗ್ಗೆ ಒಬ್ಬ ಕನ್ನಡಿಗನಾಗಿ, 400 ವರ್ಷಗಳ ನಂತರ, ಬಹುತೇಕ ಕನ್ನಡಿಗರು ನಿವಾಸ ಮಾಡುವ ಒಂದು ರಾಜ್ಯವನ್ನು ಹೊಂದಿದ್ದೇವೆಂಬುದು, ನನಗೆ ಸಂತಸದ ವಿಷಯ. ಕನ್ನಡಿಗರು ಇದನ್ನು ಅಭಿವೃದ್ಧಿಪಡಿಸಿ, ಒಂದು ದೊಡ್ಡ ರಾಜ್ಯದ ಭಾಗವಾಗುತ್ತಾರೆ. ನಾವು ನಮ್ಮ ಸ್ವಂತ ರಾಜ್ಯಕ್ಕಾಗಿ ಒತ್ತಡ ಹಾಕುತ್ತಿರುವಾಗ ನಾವು ಇದನ್ನು ಸಂಕುಚಿತ ಮನೋಭಾವದಿಂದಾಗಲೀ, ಅಥವಾ ಯಾವುದೇ ಸ್ಥಳೀಯ ಭಾವನೆಯಿಂದಾಗಲೀ ಮಾಡುತ್ತಿಲ್ಲವೆಂದು, ಸ್ಪಷ್ಟ ಪಡಿಸಲು ಇಚ್ಛಿಸುತ್ತೇನೆ. ದೇಶ ಪ್ರೇಮ ಹೊಂದಿರುವುದು ಭಾಷವಾರು ಪ್ರಾಂತ್ಯಗಳ ವಿರುದ್ಧ ಮಾತನಾಡುವವರ ಏಕೆ ಸ್ವಾಮ್ಯವಲ್ಲ. ನಾವೂ ಸಹ ಇತರರಂತೆ ದೇಶ ಪ್ರೇಮಿಗಳು. ನಮ್ಮ ನಂಬಿಕೆ ಏನೆಂದರೆ ಪೂರ್ಣ ದೇಶದ ಸಮಗ್ರತೆಯು ದೃಢ ಒಗ್ಗಟ್ಟು, ಬೆಳವಣಿಗೆ, ಅದರ ಅಭಿವೃದ್ಧಿ ಮತ್ತು ಐಕಮತ್ಯವನ್ನು ಜೋಪಾನ ಮಾಡುತ್ತದೆ.

ಕರ್ನಾಟಕಕೆ ಸಂಬಂಧಿಸಿದಂತೆ ಹೇಳುವುದಾದರೆ ,ಅದು ಒಂದು ಮಹತ್ವ ಇತಿಹಾಸವನ್ನು ಹೊಂದಿದೆ. ಅದಕ್ಕೆ ಮಹಾನ್ ಸಂಪ್ರದಾ.ವಿದೆ. ಅದರ ಕಲೆ, ಅದರ ಸಂಗಿತ, ಅದರ ವಾಸ್ತುಶಿಲ್ಪ ಚಿರಪರಿಚಿತವಾದುದು. 150 ವರ್ಷಗಳ ಹಿಂದಿನಿಂದ ಏನಾಗಿದೆಯೆಂಬದು ನಮಗೆಲ್ಲಾ ದುಃಖಕರವಾದ ಸಂಗತಿ. ನಾವು ಅನೇಕ ಪ್ರಭಾವಗಳಿಗೆ ಒಳಗಾಗಿದ್ದು, ಅದು ಬಹುಶಃ ಇಂದಿನಿಂದ ಮೈಸೂರಿನ ಎರಡರಷ್ಟು ಅಥವಾ ಮೂರರಷ್ಟಿತ್ತು. ಆ ಕಾಲಕ್ಕೆ ಆತನ ಬಳಿ ಕಡಲ ಸೇನೆಯಿತ್ತು. ಆತ ಅದನ್ನು ಫ್ರೆಂಚರಿಂದ ಪಡೆದಿದ್ದನು. ಬ್ರಿಟೀಷರಿಗೆ ಆತನ ಬಗ್ಗೆ ಹೆದರಿಕೆಯಿತ್ತು. 1779ರಲ್ಲಿ ಆತ ಶ್ರೀ ರಂಗಪಟ್ಟಣದ ಬಳಿ ಸೋತಾಗ, ಬ್ರಿಟಿಷರು ಆತನ ರಾಜ್ಯವನ್ನು ಆಕ್ರಮಿಸಿಕೊಂಡು, ಅದನ್ನು ಹಲವು ಭಾಗಗಳಾಗಿ ಮಾಡಿದರು. ಅವರಿಗೆ ಅತಿ ಅಲ್ಪ ಸಂಖ್ಯೆಯ ರಾಜ್ಯದ ವಿಭಜನೆ ಅವರಿಗೆ

ಅತ್ಯವಶ್ಯಕವಾಗಿತ್ತು. ಆದ್ದರಿಂದ ಮೈಸೂರು ಭೂ ಆವೃತ್ತ ರಾಜ್ಯವಾಯಿತು. ನಾವು ಪಶ್ಚಿಮ ತೀರವನ್ನು ಪೂರಾ ಕಳೆದುಕೊಂಡೆವು. ಆ ಕಾಲದಲ್ಲಿ ಮೈಸೂರು ಸಂಸ್ಥಾನಕ್ಕೆ ಸೇರಿದ್ದ ೨ ಜಾಗರನ್ನು ಧರ್ಮಕ್ಕೆ ಕೊಟ್ಟಂತೆ ಮದರಾಸಿಗೆ, ಅಂದರೆ ಬ್ರಿಟೀಷರಿಗೆ ನೀಡಲಾಯಿತು. ಹಲವು ಪ್ರದೇಶಗಳನ್ನು ನಿಜಾಮರಿಗೆ ಕೊಡಲಾಗಿ, ಅದನ್ನು ಪುನಃ ನಿಜಾಮರಿಂದ ಮದರಾಸ್ ಸರ್ಕಾರಕ್ಕೆ ಕೊಡಲಾಯಿತು. ನಮ್ಮನ್ನು ಚರಸ್ವತ್ತಿನಂತೆ ಪರಿಗಣಿಸಲಾಯಿತು. ಪರಿಣಾಮವಾಗಿ 1948ರ ಹಿಂದೆ, ನಾವು 22 ಆಡಳಿತಗಾರರ ಆಡಳಿತಕ್ಕೆ ಒಳಪಟ್ಟಿದೆವು. ಅದೃಷ್ಟವಶಾತ್ ದಖಿನ್ ರಾಜ್ಯಗಲ ರಾಜಕುಮಾರರು ಅದೃಶ್ಯರಾಗಲು ಒಪ್ಪಿದ್ದರಿಂದ, ಅವು ಬೊಂಬಾಯಿ ರಾಜ್ಯದಲ್ಲಿ ಹೇರಿಹೊದುವು. ಈಗಲೂ ನಾವು ಐದು ಆಡಳಿತಗಳ ಅಂಕೆಯಲ್ಲಿದ್ದೇವೆ. ಯಾವುದೇ ಕಡೆಯ ಪ್ರಜೆಗಳು ನಮ್ಮಷ್ಟು ಅನಾನುಕೂಲಕ್ಕೆ ಒಳಗಾಗಿಲ್ಲವೆಂದು ನನಗೆ ಅನಿಸುತ್ತದೆ. ಮೈಸೂರಿನಲ್ಲಿ ಹೊರತಾಗಿ, ಬೇರೆಡೆ ನೋಡಿದಾಗ, ಬೊಂಬಾಯಿನಲ್ಲಿ ಹೈದರಾಬಾದಿನಲ್ಲಿ ಮತ್ತು ಮದರಾಸಿನಲ್ಲಿ ನಾವು ಅಲ್ಪಸಂಖ್ಯಾತರು, ಜೊತೆಗೆ ಕೊಡಗು ಇದೆ. ಅದು ಸಣ್ಣ ರಾಜ್ಯ ಮತ್ತು ಲೆಕ್ಕಕ್ಕೆ ಬರುವುದಿಲ್ಲ. ಆದ್ದರಿಂದ ನಾವು ಎಲ್ಲಾ ಕಡೆ ಸಂಕಟ ಅನುಭವಿಸುತ್ತಿದ್ದೇವೆ. ಸರ್ಕಾರದ ನಾನು ಏನೂ ಹೇಳಲು ಇಷ್ಟಪಡುವುದಿಲ್ಲ. ಆದರೆ ಪ್ರಜಾಪ್ರಭುತ್ವದಲ್ಲಿ ಸಾರ್ವಜನಿಕ ಅಭಿಪ್ರಾಯ ಮತ್ತು ಸಂಖ್ಯೆ ಗಣನೆಗೆ ಬರುತ್ತದೆ. ಆದ್ದರಿಂದ ರಾಜಕೀಯದಲ್ಲಿ ಒಳಸಂಚುತನ ಲೆಕ್ಕಕ್ಕೆ ಬರುತ್ತದೆ. ಈ ಒಂದು ಕಾರಣದಿಂದ, ಮೈಸೂರಿನಿಂದ ಹೊರಗಿರುವ ಪ್ರದೇಶಗಳು, ಸಂಪದ್ಭರಿತ ಮತ್ತು ವಿಶಾಲ ಸಂಪನ್ಮೂಲಗಳಿದ್ದಾಗ್ಯೂ, ತೊಂದರೆ ಅನುಭವಿಸಿದೆ.

1915 ರಿಂದ, ಕರ್ನಾಟಕ ರಾಜ್ಯದ ರಚನೆಗೆ ಬಲವತ್ತರವಾದ ಚಳುವಳು ನಡದೇ ಇದ್ದು ಇಲ್ಲಿನ ಅನೇಕ ಗೌರವ ಸದಸ್ಯರ ಮತ್ತು ಹಲವರ ಮನಗಳಲ್ಲಿ, ಈ ಪ್ರಸ್ತಾಪದ ಬಗ್ಗೆ ಮೈಸೂರು ಪರವಾಗಿಲ್ಲವೆಂಬ ಒಂದು ಅನುಮಾನವಿದೆ. ಇದು ಸರಿಯಲ್ಲ. ಮೈಸೂರು ಇದರ ಪರವಾಗಿದೆ. ಇದರ ಬಗ್ಗೆ ಆಡೆತಡೆ ವಿರೋಧ ಅಥವಾ ಯಾವುದೇ ಅಸಮ್ಮತಿಯ ಹೇಳಿಕೆ, ಇಂದು ಇದ್ದಲ್ಲಿ, ಅದು ಕೇವಲ ಒಂದೆರಡು ವರ್ಷಗಳಿಂದೀಚೆಗೇ ಮಾತ್ರ ಅದಕ್ಕೆ ಮುನ್ನ, ಮೈಸೂರು ಮತ್ತು ಕರ್ನಾಟಕ್ಕ ರಾಜ್ಯಗಳು ಜೊತೆಯಾಗಿ ಈ ರಾಜ್ಯದ ರಚನೆಗೆ ಬೇಡಿಕೆ ಸಲ್ಲಿಸಿದ್ದುವು. ನಾನು ಹಲವು ಕಾಲ ಅಧ್ಯಕ್ಷನಾಗಿದ್ದು, ಅದರ ಬೆಳವಣಿಗೆ ಮತ್ತು ಅಭಿವೃದ್ಧಿಯ ಕಾಲದಲ್ಲಿ ನಾನು ಸೇವೆ ಸಲ್ಲಿಸ್ದ್ದು, ಮೈಸೂರು ಕಾಂಗ್ರೆಸ್ ಸಹ ಯಾವಾಗಲೂ ಈ ಧ್ಯೇಯದ ಪರವಾಗಿಯೇ ಇತ್ತು.

ಈ ವಿಷಯದ ಬಗ್ಗೆ ನಾವು ಅನೇಕ ನಿರ್ಣಯಗಳನ್ನು ಮಂಡಿಸಿದ್ದೇವೆ. ಕಾಲದ ಕೊರತೆಯಿಂದಾಗ ನಾನು ಈ ಎಲ್ಲಾ ನಿರ್ಣಯಗಳ ಬಗ್ಗೆ ಸದನಕ್ಕೆ ತಿಳಿಸಲು ಸಾಧ್ಯವಿಲ್ಲ. ಆದರೆ 1949 ರಲ್ಲಿ ಮೈಸೂರು ಕಾಂಗ್ರೆಸ್ಸ ಕ್ರಿಯಾ ಸಮಿತಿಯು ಮೈಸೂರನ್ನೊಳಗೊಂಡ ಕರ್ನಾಟಕ ರಾಜ್ಯದ ರಚನೆ ಅತ್ಯವಶ್ಯಕ ಎಂಬ ತೀರ್ಮಾನವನ್ನು ತೆಗೆದುಕೊಂಡಿತು.

ಮೈಸೂರು ಬೇರೆಯಾಗಿರಬೇಕೆಂಬ ಕೂಗು ಇತ್ತಿಚಿನದು. ಈ ಕೂಗು ಮೈಸೂರಿನಲ್ಲಿ ಸಾರ್ವತ್ರಿಕವಾದುದೇನೂ ಅಲ್ಲ, ಈ ಕೂಗನ್ನು ಹಾಕುತ್ತಿರುವವರು ಕೇವಲ ಒಂದು ಸಣ್ಣ ಭಾಗದವರು ಮಾತ್ರ. ನಾನು ಈ ಸದನಕ್ಕೆ ತಿಳಿಯಪಡಿಸುವುದೇನೆಂದರೆ, ಪ್ರಕೃತಿಯು ಹೇಗೆ ಶೂನ್ಯವನ್ನು ತಿರಸ್ಕರಿಸುತ್ತದೆಯೋ ಹಾಗೆ ಮಾನವ ಸ್ವಭಾವವು ಸಹ ಬದಲಾವಣೆಯನ್ನು ತಿರಸ್ಕರಿಸುತ್ತದೆ. ಅದು ಎತ್ತಡಕ್ಕೆ ಮಣಿದು ನಂಬಿಕೆಯಿಂದಾಗಲೀ ಅಥವಾ ಹೊರಗಿನ ಪ್ರಭಾವದಿಂದಾಗಲೀ ವಿರೋಧಿಸುತ್ತದೆ.

ನಾನನು ಈ ಮೂಲಕ ಮೈಸೂರು ಸ್ನೇಹಿತರಲ್ಲಿ, ಈ ಸಮಯದಲ್ಲಿ, ಸಂಪೂರ್ಣ ದೇಶಕ್ಕೆ ಮತ್ತು ಕರ್ನಾಟಕ ರಾಜ್ಯಕ್ಕೆ ಇತಿಹಾಸ ಬರೆಯುತ್ತಿರುವಾಗ, ಅಡ್ಡಿ ಆತಂಕ ಒಡ್ಡದಿರಲು ಮನವಿ ಮಾಡುತ್ತೇನೆ.

ಮೈಸೂರು ಈ ವಿಷಯದ ಪರವಾಗಿ ಎಂದು ಪುನರುಚ್ಚರಿಸಿ,ೀ ಸದನಕ್ಕೆ ನಾನು ನಮ್ರತೆಯಿಂದ ಒಂದು ವಿಷಯ ತಿಳಿಸಬಯಸುತ್ತೇನೆ. ನಾನು ಹಿಂದೆ ಹೇಳಿರುವಂತೆ, ಕನ್ನಡ ಭಾಷೆ ಮಾತನಾಡುವ ಪ್ರಾಂತ್ಯಗಳನ್ನು ಅಡ್ಡಿಪಡಿಸಿ, ವಿವಿಧ ಭಾಗಗಳಾಗಿ ಮಾಡಿದ್ದರಿಂದಾಗಿ, ಕನ್ನಡಿಗರು ಇತರೆ ಭಾಷಾ ಗುಂಪುಗಳ ಪ್ರಭಾವಕ್ಕೆ ಒಳಪಡಿಸಬೇಕಾಯಿತು.

ಭಾಷೆಯ ಆಧಾರದ ಮೇಲೆ ಆಂಧ್ರರು ಕೋಲಾರ ಮತಗೆ ಸೇರಬೇಕೆನ್ನುತ್ತಾರೆ. ನಿಜ ಕೋಲಾರ ಪ್ರಾಂತ್ಯದಲ್ಲಿ ತೆಲುಗು ಮಾತನಾಡುರ ಜನರ ಬಹುಮತವಿದೆ. ಆದರೆ ಬಹು ಮುಖ್ಯವಾದ ವಿಷಯವೇನೆಂದರೆ, ಕೋಲಾರದ ಜನರು ತಾವಾಗಿಯೇ ಎಂದೂ ಬೇರೆಡೆಗೆ ಸೇರಬೇಕೆಂದು ಆಸೆ ವ್ಯಕ್ತಪಡಿಸಲಿಲ್ಲ. ಮತ್ತು ಕರ್ನಾಟದಲ್ಲೇ ಇರಲು ಇಚ್ಛಿಸುತ್ತಾರೆ. ತೆಲಗು ಭಾಷೆಯನ್ನಾಡುರ ಅಥವಾ ಇತರ ಭಾಷೆಯಾಢುವ ಯಾರೇ ಆಗಲಿ, ಕೋಲಾರ ಜಿಲ್ಲೆಯ ಯಾರೇ ಪ್ರಧಾನ ವ್ಯಕ್ತಿಯಾಗಲಿ ಆಂಧ್ರ ಪ್ರದೇಶವನ್ನು ಸೇರಬಾ೦ಕೆಂಬ ಇಚ್ಛೆಯನ್ನು ವ್ಯಕ್ತ ಪಡಿಸಿಲ್ಲ, ಏಕೆಂದರೆ, ಬಹಳ ಕಾಲದಿಂದ ನಮ್ಮೆಡನಿರುವ ಸಂಬಂಧದಿಂದಾಗಿ, ನಾವು ಜೊತೆ.ಲ್ಲಿ ಕೆಲಸ ಮಾಡಿದ್ದೇವೆ ಮತ್ತು ಈಗ ಭಾವನೆಗಳಿಂದಾಗಿ ಅವರು ಬೇರೆ ಹೋಗಲು ಇಚ್ಛಿಸುವುದಿಲ್ಲ. ಅವರು ಕನ್ನಡವನ್ನು ಚೆನ್ನಾಗಿ ಅರ್ಥಮಾಡಿಕೊಳ್ಳುತ್ತಾಲೆಂಬುದು ಗಮನಾರ್ಹ ಸಂಗತಿ. ಇದು ಪರಿಸ್ಥಿತಿ.

ಕಾಸರಗೋಡು ತಾಲ್ಲೂಕಿಗೆ ಸಂಬಂಧಿಸಿದಂತೆ, ಶೇ. 60 ರಷ್ಟು ಪ್ರದೇಶವನ್ನು ಅವರಿಗೆ (ಕೇರಳ) ಬಿಟ್ಟುಕೊಡಲು ಸಾಧ್ಯ. ಹಲವರು ಚಂದ್ರಗಿರಿ ನದಿಯ ದಕ್ಷಿಣ ಭಾಗವನ್ನು ಕೇಳುತ್ತಿದ್ದಾರೆ. ಆದರೆ ಪಯಸ್ವಿನಿ ನದಿಯ ದಕ್ಷಿಣ ಭಾಗವನ್ನು ಅವರಿಗೆ ಕೊಡಬಹುದೆಂದು ನನ್ನ ಅಭಿಪ್ರಾಯ. ಅದು ಒಂದು ಚಿಕ್ಕ ಪ್ರದೇಶ ಮತ್ತು ಅದಕ್ಕೆ ಪ್ರಾಕೃತಿಕ ಮಿತಿ ಇರುವುದರಿಂದ, ಕೊಡುವುದು ಸಾಧ್ಯವಾಗುತ್ತದೆ.

ಉತ್ತರಕ್ಕೆ ಬಂದಂತೆ, ನಮಗೂ ಮಹಾರಾಷ್ಟ್ರದವರಿಗೂ ವಿವಾದವಿರುವ ಹಲವು ಪ್ರಾಂತ್ಯಗಳಿವೆ. ಉದಾ: ಬೆಳಗಾಂ ಜಿಲ್ಲೆ, ನನ್ನ ಸ್ನೇಹಿತರು ಕಾರವಾರ ಜಿಲ್ಲೆಯನ್ನು ಬೇಕೆನ್ನುತ್ತಾರೆನಿಸುತ್ತದೆ. ಕಾರವಾರ ಊಂದರು ಕರ್ನಾಟಕಕ್ಕೆ ಊಂದಿದೆ. ಅಲ್ಲೂ ಸಹ ಅವರು ಕೊಂಕಣಿ ಭಾಷೆ ಮರಾಠಿಗೆ ಸಮೀಪವಾಗಿದೆ ಎನ್ನುತ್ತಾರೆ. ಇತರರು ಅದಕ್ಕೆ ಏನೂ ಸಂಬಂಧವಿಲ್ಲ ಎನ್ನುತ್ತಾರೆ. ಹಲವು ಪ್ರಾಂತ್ಯಗಳೂ ಉದಾ: ಬೆಳಗಾಂ ನಗರ ಮತ್ತು ನಿಪ್ಪಾಣಿ ಪಟ್ಟಣಗಳಿವೆ. ಅವನ್ನು ಹಿಂದಿನ ಲಂಗರಿನಿಂದ ಬೇರ್ಪಡಿಸಿದಲ್ಲಿ, ಅದು ಆ ಪ್ರದೇಶಗಳಿಗೆ ಭಯನಕವಾಗುತ್ತದೆ. ಅವರು ಇಂದು ಹೊಂದಿರುವ ಅನುಕೂಲಗಳು ಅಥವಾ ಅಭಿವೃದ್ದಿಯನ್ನು ಪಡೆಯಲು ಸಾಧ್ಯವಿಲ್ಲ. ಯಾವುದೇ ಕೈಗಾರಿಕಾ ಅಥವಾ ವಾಣಿಜ್ಯ ನಗರವನ್ನು ಒಂದು ಭಾಷೆಯ ಘಟಕವನ್ನು ಆಗಿ ಪರಿಗಣಿಸಲು ಸಾಧ್ಯವಿಲ್ಲ.

ನಾನು ಕರ್ನಾಟಕದಲ್ಲೇ ವಾಸಿಸಿದರೂ, ನಾನು ಮೊದಲು ಭಾರತೀಯ ಮತ್ತು ನಂತರವೇ ನಾನು ಕರ್ನಾಟಕದವನು ಎಂದು ಭಾವಿಸುತ್ತೇನೆ. ನಾವು ಈ ರಾಜ್ಯಗಳನ್ನು ರಚಿಸುವಾಗ. ಈ ವಿಷ.ಗಳ ಬಗ್ಗೆ ತೀಕ್ಷ್ಣ ಭಾವನೆಗಳೇನು ಹೊಂದಿರಬಾರದು, ನಾವು ಪ್ರತಿ ರಾಜ್ಯವನ್ನೂ ಒಂದಖ ಪೂರ್ಣ ಕಣ ಪಟ್ಟಿಯಂತೆ ಕಟ್ಟಿರಬೇಕು. ಆಗ ಎಲ್ಲಾ ರಾಜ್ಯಗಳೂ ಪೂರ್ಣವಾಗಿ ಅಭಿವೃದ್ದಿ ಹೊಂದಿ, ಎಲ್ಲರೂ ಒಗ್ಗಟ್ಟಿನಿಂದ ಜೊತೆಯಾಗಿ ಬಾಳುತ್ತಾ ಅಂತರ್ ರಾಷ್ಟ್ರೀಯ ವಲಯದಲ್ಲಿ ಭಾರತದ ಘನತೆಯನ್ನು ಹೆಚ್ಚಿಸಬಹುದು.

## ಆಂಧ್ರ ರಾಜ್ಯ ಮಸೂದೆ ಕುರಿತು ಚರ್ಚೆ

### 3ನೇ ಆಗಸ್ಟ್ 1953

ತಡವಾದರೂ ಕಾರ್ಯರೂಪಕೆ ಬರುತ್ತಿರುವ ಆಂಧ್ರ ರಾಜ್ಯ ಮಸೂದೆಯನ್ನು ನಾನು ತುಂಬು ಹೃದಯದಿಂದ ಸ್ವಾಗತಿಸುತ್ತೇನೆ. ನಮಗೆ ಕೆಲವರಿಗನಿಸುವಂತೆ ಆಂಧ್ರ ರಾಜ್ಯವನ್ನು 1950ರಲ್ಲೇ ಸ್ಥಾಪಿಸಬೇಕಿತ್ತು. ಆಂಧ್ರವನ್ನು ಪಡೆಯುತ್ತಿರುವ ನನ್ನ ಆಂಧ್ರ ಮಿತ್ರರಿಗೆ ನನ್ನ ಶುಭಾಶಯಗಳು. ಆಡಳಿತಾತ್ಮಕ ಅನುಕೂಲಗಳನ್ನು ಗಮನದಲ್ಲಿಟ್ಟುಕೊಳ್ಳಬೇಕಾದರೂ, ಭಾಷೆಯ ಆಧಾರದ ಮೇಲೆ ಭಾರತವನ್ನು ಒಂದು ಮಾಡುವ ನಂಬಿಕೆಯಿಟ್ಟಿರುವ ನಮಗೆ ಸಂಪೂರ್ಣ ತೃಪ್ತಿ ತಂದಿಲ್ಲ. ನಿಜವಾಗಿಯೂ ಆಂಧ್ರವನ್ನು ರಚಿಸುವುದೇ ಆದರೆ ಹೈದರಾಬಾದ್ ರಾಜ್ಯದಲ್ಲಿರುವ ಪ್ರದೇಶಗಳಿಗೆ ಸೇರಿಸಲ್ಪಡಬೇಕು.

ಈ ಹೆಜ್ಜೆಯನ್ನು ಸ್ವಾಗತಿಸುತ್ತಾ, ಮೈಸೂರು ರಾಜ್ಯಕ್ಕೆ ಬರುವ ಹಲವು ಭಾಗಗಳ ಬಗ್ಗೆ ಹಲವು ವಿಷಯಗಳನ್ನು ಉಲ್ಲೇಖಿಸುತ್ತೇನೆ. ನನ್ನ ಹಲವು ಮಿತ್ರರು ತಿಳಿದಿರುವಂತೆ ಕರ್ನಾಟಕವು ಮೂರನೆಯ ವ್ಯಕ್ತಿಯಾಗಿ ಮಧ್ಯೆ ಪ್ರವೇಶಿಸಿ, ಎರಡು ಕಡೆಯಿಂದಲೂ ಲಾಭ ಪಡೆದು ಬಳ್ಳಾರಿ ಜಿಲ್ಲೆಯನ್ನು ಪಡೆದುಕೊಂಡಿದೆ ಎಂಬುದಕೆ ಕ್ಷಮೆ ಕೇಳುತ್ತೇನೆ. ಇದು ವಾಸ್ತವವಲ್ಲ, ವಾಸ್ತವದಲ್ಲಿ ಇದನ್ನು ಮೈಸೂರಿನ ಜನ ಮತ್ತು ಹೊರಗಿನ ಕನ್ನಡಿಗರು ಒತ್ತಾಯ ಮಾಡುತ್ತಲೇ ಇದ್ದರು. ಕೇಂದ್ರ ಸರ್ಕಾರದ ಈ ನಿರ್ಧಾರ ಆ ಬೇಡಿಕೆಯನ್ನು ಪೂರೈಸಿದೆ. ಮೈಸೂರಿನ ಹೊರಗಿನ ಪ್ರದೇಶಗಳನ್ನು ಮೈಸೂರಿಗೆ ಸೇರಿಸಿ ಕರ್ನಾಟಕ ರಾಜ್ಯವನ್ನು ರಚಿಸಬೇಕೆಂಬ ಭಾರಿ ಒತ್ತಾಯವಿದೆ. ಈ ವಿಷಯದುದ್ದಕ್ಕೂ ಬಹಳ ವಿವೇಚನೀಯ ನಿಲುವನ್ನು ವ್ಯಕ್ತಪಡಿಸುವ ನನ್ನ ಮೈಸೂರಿನ ಮಿತ್ರರಿಗೆ ನನ್ನ ಶುಭಾಶಯಗಳನ್ನು ಸಲ್ಲಿಸಬೇಕು.

ಈ ಕಾಯಿದೆಯು ಈಗ ಮದರಾಸು ರಾಜ್ಯದ ಶೇಷ ಪ್ರದೇಶವನ್ನು ಸಂಕುಚಿತಗೊಳಿಸಿ ಮೈಸೂರು ರಾಜ್ಯದ ವಿಸ್ತೀರ್ಣವನ್ನು ಹೆಚ್ಚಿಸುತ್ತದೆ. ಈ ಹೆಜ್ಜೆಯು ಆಶಿಸುವಂಥದಾಗಿದ್ದು, ಸರ್ಕಾರವು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಬೇಕೆಂದು ಮನವಿ ಮಾಡಿಕೊಳ್ಳುತ್ತೇನೆ. ಈ ಕಾರ್ಯವನ್ನು ಕೈಗೆತ್ತಿಕೊಂಡದ್ದಕ್ಕಾಗಿ ನಾನು ಋಣಿಯಾಗಿದ್ದೇನೆ ಮತ್ತು ನನ್ನ ಶುಭಾಶಯಗಳು. ಅವರು ಇತರೆ ಕನ್ನಡಿಗ ಪ್ರದೇಶಗಳಾದ ದಕ್ಷಿಣ ಕನ್ನಡ ಮತ್ತು ಇತರೆ ಜಿಲ್ಲೆಗಳನ್ನೂ ಸೇರಿಸಬಹುದು; ಅದೂ ಬರುತ್ತದೆ ಮತ್ತು ಬರುತ್ತದೆಂದು ಆಶಿಸುತ್ತೇನೆ.

---

ಲೋಕಸಭೆ ನಡವಳಿಕೆ ದಿ: 3.8.53 ಪುಟ 780-790

ಬಳ್ಳಾರಿ ಜಿಲ್ಲೆ ಬಹಳ ನತದೃಷ್ಟ ಜಿಲ್ಲೆ. ಇಡೀ ಬಳ್ಳಾರಿ ಜಿಲ್ಲೆಯನ್ನು ಮೈಸೂರಿಗೆ ಸೇರಿಸಬೇಕಿತ್ತು ಎಂಬುದು ನನ್ನ ಆಸೆ. ನನ್ನ ಈ ಮಾತುಗಳನ್ನು ಅವಲಂಬಿಸಬಲ್ಲ ಮಾಹಿತಿಯಿಂದ ಹೇಳುತ್ತಿದ್ದೇನೆ. ಇಡೀ ಬಳ್ಳಾರಿ ಜಿಲ್ಲೆಯು ಮೈಸೂರಿಗೆ ಸೇರಬೇಕಿತ್ತು ಎನ್ನಲು ಮೊದಲು ಮಾಹಿತಿ ಜೆ.ವಿ.ಪಿ. ವರದಿ ಆಂಧ್ರ ಪ್ರದೇಶವನ್ನು ಮದ್ರಾಸ್ ರಾಜ್ಯದ ವಿವಾದರಹಿತ ಆಂಧ್ರದ ಪ್ರದೇಶಗಳಿಂದ ರಚಿಸಬೇಕೆಂದು ಹೇಳಿದೆ. 1921ರಲ್ಲಿ ಬಂದ ಕೇಲ ರ್ ವರದಿ ದಿನಗಳಿಂದಲೂ ಬಳ್ಳಾರಿ ವಿವಾದದಲ್ಲಿದೆ.

ಆಂಧ್ರದವರಿಗೆ ಅವರ ಪ್ರದೇಶಗಳು ಆದಷ್ಟು ಶೀಘ್ರವಾಗಿ ದೊರೆಯಬೇಕು. ಆದರೆ, ಆ ವಿಷಯವನ್ನು ಉಳಿದುದನ್ನು ಹಂಚಿಕೊಳ್ಳಲು ಕಚ್ಚಾಡುವವರಂಥಲ್ಲದೇ ಅಣ್ಣ ತಮ್ಮಂದಿರಂತೆ ಸಾವಧಾನವಾಗಿ ಕುಳಿತು ನಮಗೆ ಬಂದಿರುವುದನ್ನು ಹಂಚಿಕೊಳ್ಳೋಣ.

ಮೈಸೂರು ಜನರ ವಿರುದ್ಧ ಹಲವು ಟೀಕೆಗಳನ್ನು ಮಾಡಲಾಗಿದೆ. ಮೈಸೂರಿನ ಜನರು ತಮ್ಮೊಡನೆ ಬರಲು ಸಿದ್ಧರಿರುವ ಎಲ್ಲ ಜನರನ್ನೂ ಯಾವಾಗಲೂ ಸ್ವಾಗತಿಸಿದ್ದಾರೆ. ಎಲ್ಲಕ್ಕೂ ಮಿಗಿಲಾಗಿ, ಯಾವುದೇ ಹೊಣೆಗಾರಿಕೆಯಿಲ್ಲದೇ ನಾವು ಯಾವುದೇ ಆಸ್ತಿಯನ್ನೂ ಪಡೆಯುವುದಿಲ್ಲ. ನಾವು ಇನ್ನೂ ಹೆಚ್ಚಿನ ಹೊರೆಯನ್ನು ಹೊರಬೇಕೆಂಬ ನಮ್ಮ ಗೌರವ ಮಿತ್ರರಾದ ರಘುರಾಮಯ್ಯನವರ ಮಾತನ್ನು ನಾನು ಒಪ್ಪುವುದಿಲ್ಲ - - - - ಮೈಸೂರಿಗೆ ಇನ್ನೂ ಹೆಚ್ಚಿನ ಹೊರೆ ಹೊರಿಸುವುದು ಉಚಿತವೆಂದು ನನಗನಿಸುವುದಿಲ್ಲ. ಅವರ ಪ್ರದೇಶದಲ್ಲಿರುವ ತುಂಗಭದ್ರಾ ಯೋಜನೆಯ ಯಾಜಮಾನ್ಯವನ್ನು ಮೈಸೂರಿನ ಜನ ತಮ್ಮದೆಂದು ಹೇಳಿರುವುದು ನ್ಯಾಯಸಮ್ಮತ್ರವಲ್ಲವೆಂದು ಗೌರವನೀಯ ಗೃಹ ಮಂತ್ರಿಗಳು ಕೂಡಾ ಹೇಳಿದ್ದಾರೆ. ನಾನು ಅವರಿಗೆ ಏಳನೇ ವಿವರಪಟ್ಟಿಯ ಮೊದಲನೆಯ ಕಲಮನ್ನು ಉಲ್ಲೇಖಿಸಲು ಕೇಳುತ್ತೇನೆ. ಎಲ್ಲ ಭೂಮಿ, ಎಲ್ಲ ಉಗ್ರಾಣಗಳು, ವಸ್ತುಗಳು ಮತ್ತು ಇತರ ಸರಕುಗಳು ಯಾವ ರಾಜ್ಯದಲ್ಲಿದ್ದರೆ ಆ ರಾಜ್ಯಕೆ ಸೇರಬೇಕೆಂದು ವಿವರವಾಗಿ ಕೊಟ್ಟಿದೆ. ಮುಖ್ಯ ಅಣೆಕಟ್ಟು ಹೊಸಪೇಟೆ ತಾಲ್ಲೂಕಿನಲ್ಲಿದ್ದು, ಅದು ಮೈಸೂರಿನಲ್ಲೇ ಇರಬೇಕಾಗಿದೆ. ಅದರಿಂದ ನಮಗೆ ಅದರ ಮೇಲೆ ನಿಯಂತ್ರಣವಿರಬೇಕು. ಆದರೆ, ಎಲ್ಲ ಅಂಶಗಳನ್ನೂ ಪರಿಶೀಲಿಸಿದ ನಂತರ ಎತ್ತರದ ಕಾಲುವೆ ನಿರ್ಮಿಸಿದ ನಂತರ ಮತ್ತು ವಿದ್ಯುತ್ ಉತ್ಪಾದಿಸಿದ ನಂತರ ಮತ್ತು ಯಾವ ಪ್ರದೇಶಗಳು ಕರ್ನಾಟಕಕೆ , ಮೈಸೂರಿಗೆ ಮತ್ತು ಆಂಧ್ರಕೆ ಹೋಗುತ್ತವೆಂದು ತೀರ್ಮಾನವಾದಾಗ ಸ್ಪಷ್ಟ ಚಿತ್ರ ಮುಂದು ಬರುತ್ತದೆ. ಆಗ ಮಿಕೆ ಲ್ಲಾ ವಿಷಯಗಳನ್ನು ಜೊತೆಯಲ್ಲಿ ಕುಳಿತು ಆಸ್ತಿ ಮತ್ತು ಹೊರೆಯನ್ನು ಹಂಚಿಕೊಳ್ಳಬಹುದು. ಆಗ ಮೈಸೂರು ಸರ್ಕಾರ ಅಭ್ಯಂತರ ವ್ಯಕ್ತಪಡಿಸುವುದಿಲ್ಲವೆಂದು ಈ ಸಭೆಗೆ ಆಶ್ವಾಸನೆ ನೀಡುತ್ತೇನೆ. ನಾವು ಈ ವಿಷಯವಾಗಿ ಜಗಳವಾಡಲು ಇಷ್ಟಪಡುವುದಿಲ್ಲ ಮತ್ತು ಅದು ಸರಿಯೂ ಅಲ್ಲ. ಮೈಸೂರಿನ ಜನರ ಪರವಾಗಿ ನಾನು ಹೇಳುವುದೇನೆಂದರೆ, ನಾವು ಯಾವುದೇ ನಿರ್ಧಾರಿತ ಒಪ್ಪಂದಕೆ ಮುಕ್ತ ಮನಸ್ಸಿನಿಂದ ಇರುತ್ತೇವೆ. ನಾನು ನಮ್ಮ ಆಂಧ್ರ ಮಿತ್ರರಿಂದ ಇದೇ ಭಾವನೆಯನ್ನು ಆಶಿಸುತ್ತೇನೆ.

## ಪಂಚವಾರ್ಷಿಕ ಯೋಜನೆಗಳ ಒಂದು ಚರ್ಚೆ

### 18ನೇ ಡಿಸೆಂಬರ್ 1952

ನಾವು ಎದುರಿಸುತ್ತಿರುವ ಹಲವಾರು ಸಮಸ್ಯೆಗಳನ್ನು ಪರಿಹರಿಸಲು ಭಾರಿ ಶ್ರಮಪಡುತ್ತಿರುವ ಮತ್ತು ತೃಪ್ತಿಕರವಾಗಿ ಕಾರ್ಯನಿರ್ವಹಿಸುತ್ತಿರುವ ಯೋಜನಾ ಆಯೋಗವನ್ನು ನಾನು ಅಭಿನಂದಿಸುತ್ತೇನೆ. ನಾವು ಇಂದು ದೇಶದಲ್ಲಿ ಎದುರಿಸುತ್ತಿರುವ ಮುಖ್ಯ ಸಮಸ್ಯೆ ಮಾನವ ಸಂಪನ್ಮೂಲದ ಬಳಕೆ ಎಂಬ ಅಂಶವನ್ನು ಗುರುತಿಸಿ ಅರಿತಿರುವುದಕ್ಕಾಗಿ ಅವರಿಗೆ ನಾನು ಪ್ರತ್ಯೇಕವಾಗಿ ಅಭಿನಂದನೆಗಳನ್ನು ಸಲ್ಲಿಸುತ್ತೇನೆ.

ಗ್ರಾಮಗಳಲ್ಲಿ ವಾಸಿಸುತ್ತಿರುವ ನಿರುದ್ಯೋಗಿ ಮತ್ತು ಅರೆ ನಿರುದ್ಯೋಗಿಗಳ ಬಗ್ಗೆ ಬಹಳ ಕಳವಳ ವ್ಯಕ್ತಪಡಿಸಲಾಗುತ್ತಿದೆ. ಇಂದು ನಿರುಪಯೋಗವಾಗಿರುವ ಮಾನವ ಶಕ್ತಿಯ ಬಳಕೆಗೆ ಸಾಕಷ್ಟು ಒತ್ತು ನೀಡಲಾಗುತ್ತಿದೆ. ಈ ದೃಷ್ಟಿಯಲ್ಲಿ ಪ್ರತ್ಯೇಕ ಒತ್ತನ್ನು ಸಣ್ಣ ಕೈಗಾರಿಕೆ ಮತ್ತು ಗುಡಿ ಕೈಗಾರಿಕೆಗೆ ನೀಡಲಾಗುತ್ತಿದೆ. ನಾನು ಈ ವಿಷಯದ ಬಗ್ಗೆ ಮಾತನಾಡುತ್ತಾ ಒಂದು ಅಂಶ ಹೇಳ ಬಯಸುತ್ತೇನೆ. ಜನರ ಶಕ್ತಿಯನ್ನು ಸರಿಯಾದ ದಾರಿಯಲ್ಲಿ ಹರಿಸುವವರೆಗೂ ಯಾವುದೇ ಯೋಜನೆಯು ಯಶಸ್ವಿಯೂ ಆಗುವುದಿಲ್ಲ, ಅದಕೊಂದು ಅರ್ಥವೂ ಇರುವುದಿಲ್ಲ. ಇಷ್ಟು ಹೇಳಿದ ನಂತರ ಯೋಜನಾಧಿಕಾರಿಗಳಿಗೆ ಮತ್ತು ಸರ್ಕಾರಕೆ ನಾನು ಒತ್ತಿ ಹೇಳುವುದೇನೆಂದರೆ, ಅವರಿಗೆ ನಿಜವಾಗಿಯೂ ಜನರಲ್ಲಿ ಆಸಕ್ತಿ ಮೂಡಿಸಿ ಅವರ ಶಕ್ತಿಯನ್ನು ಹೊರತರಬೇಕಾದರೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀರಾವರಿಯ ಸಣ್ಣ ಯೋಜನೆಗಳಿಗೆ ನೀಡಬೇಕು. ಇಂತಹ ವಿಷಯಗಳು ಜನರಲ್ಲಿ ಉತ್ಸಾಹ ಮೂಡಿಸುತ್ತದೆ. ಅಪೇಕ್ಷಿತ ಪರಿಣಾಮವನ್ನು ನೀಡುತ್ತದೆ ಮತ್ತು ಅವರ ಜೀವನವನ್ನು ಮೊದಲಿಗಿಂತ ಉತ್ತಮಗೊಳಿಸುತ್ತದೆ. ಈ ದೃಷ್ಟಿಯಿಂದ ನಾನು ಯೋಜನಾ ಆಯೋಗ ಮತ್ತು ಸರ್ಕಾರಕೆ ನೀಡುವ ಸಲಹೆ ಏನೆಂದರೆ ಕೂಡಲೇ ರಾಜ್ಯ ಸರ್ಕಾರಗಳನ್ನು ಸಂಪರ್ಕಿಸಿದರೆ ಅವರು ಸ್ಥಳೀಯ ನಾಯಕತ್ವವನ್ನು ಸಂಪರ್ಕಿಸಿ ಎಲ್ಲೆಲ್ಲಿ ಸಣ್ಣ ವಿಧಾನಗಳನ್ನು ಅಳವಡಿಸಿಕೊಳ್ಳಬೇಕೆಂದು ತೀರ್ಮಾನಿಸಿದರೆ ಆಗ ಜನರ ಉತ್ಸಾಹವನ್ನು ಬಳಸಿಕೊಂಡು ಕಡಿಮೆ ವೆಚ್ಚದಲ್ಲಿ ಕಟ್ಟಬಹುದು.

ನನ್ನ ಸ್ವಂತ ಜಿಲ್ಲೆಯಲ್ಲಿ 20 ವರ್ಷಗಳ ಹಿಂದೆ ಗೋವು ಕಟ್ಟಾಯಿ ಬಿರುಕು ಬಿಟ್ಟಿತ್ತು. ಲೋಕೋಪಯೋಗಿ ಇಲಾಖೆ - 1 ತನ್ನೆಲ್ಲಾ ನಂಬಿಕೆಯಿಂದ ರಿಪೇರಿ ವೆಚ್ಚವನ್ನು ಸುಮಾರು ರೂ. 8500-00 ವರೆಗೆ ಅಂದಾಜು ಮಾಡಿದ್ದರು. ಅವರ ನಿಯತ್ತಿಗೆ ನನ್ನ ಧನ್ಯವಾದಗಳು. ಆದರೆ ಹಲವು ಸ್ಥಳೀಯ ನಾಯಕರು ಮುಂದೆ ಬಂದಾಗ ಒಬ್ಬ ದಯಾಳು ಅಧಿಕಾರಿ ಮುಂದೆ ಬಂದು ಹೀಗೆ ಹೇಳಿದ ನೋಡಿ ನನ್ನ ಬಳಿ 3000-00 ರೂ. ಗಳಿವೆ. ಈ ಕೆಲಸವನ್ನು ಕೈಗೆತ್ತಿಕೊಳ್ಳುವುದಾದರೆ, ಇಡೀ ಮೊತ್ತವನ್ನು ನಿಮ್ಮ ಕೈಯಲ್ಲಿಡಲು ನನಗೆ

---

ಲೋಕಸಭೆ ನಡವಳಿಕೆ ದಿ. 18-12-52 ಪುಟ 2715-2720

ಯಾವುದೇ ಅಭ್ಯಂತರವಿಲ್ಲ ಅಲ್ಲಿ ಕೆಲಸ ನಡೆಯುತ್ತಿರುವಾಗ ನಾನು ಅಲ್ಲಿಗೆ ಹೋಗಿದ್ದೆ, ಒಂದು ತಿಂಗಳಲ್ಲಿ ಎಲ್ಲ ಕೆಲಸವೂ ಮುಗಿದಿದ್ದೇ ಅಲ್ಲದೇ, ಗೋವು ಕಟ್ಟಾಯಿಯನ್ನು ವಿಸ್ತರಿಸಲಾಗಿತ್ತು. ಅದು ಎಷ್ಟು ದೊಡ್ಡದಾಗಿತ್ತೆಂದರೆ ಇಡೀ ಗ್ರಾಮದ ಪಶುಗಳಿಗೇ ಅಲ್ಲದೇ ಸುತ್ತಮುತ್ತಲಿನ ಹಳ್ಳಿಗಳ ಪಶುಗಳಿಗೂ ಸಾಕಾಗುವಷ್ಟು ನೀರಿತ್ತು. ಈ ವಿಷಯ ಹೇಳಲು ನನಗೆ ಬಹಳ ಸಂತೋಷವಾಗುತ್ತದೆ. ಇಡೀ ಕೆಲಸವನ್ನು ಕೇವಲ 3000 ರೂಪಾಯಿಗಳಲ್ಲಿ ಮುಗಿಸಿದ್ದರು. ಜನರಲ್ಲಿ ಉತ್ಸಾಹ ಮೂಡಿಸುವ ವಿಧಾನವೆಂದರೆ ಇದು. ಈ ದೃಷ್ಟಿಯಿಂದ ಸಣ್ಣ ನೀರಾವರಿ ಯೋಜನೆಗಳಿಗೆ ಹೆಚ್ಚಿನ ಪ್ರಾಶಸ್ತ್ಯ ನೀಡಬೇಕೆಂದು ಹೇಳಬಯಸುತ್ತೇನೆ. ಅಲ್ಲದೇ ಬೃಹತ್ ನೀರಾವರಿ ಯೋಜನೆಗಳಲ್ಲೂ, ಯೋಜನಾ ಆಯೋಗ ಹೇಳುವಂತೆ ಕಾಲುವೆಗಳನ್ನು ತೆಗೆಯುವ ಕೆಲಸ ಹಳ್ಳಿಯವರಿಗೇ ಕೊಡಬೇಕು ಮತ್ತು ಅಣೆಕಟ್ಟನ್ನು ಕಟ್ಟುವ ಕೆಲಸವೂ ಅವರಿಗೇ ಒಪ್ಪಿಸಬೇಕು. ನಾನು ಕೇಳುವುದೇನೆಂದರೆ, ಎಲ್ಲೆಲ್ಲಿ ಸಾಧ್ಯವಾದರೆ ಅಲ್ಲಿ ಯಂತ್ರಗಳ ಬದಲಾಗಿ ಮಾನವ ಶ್ರಮವನ್ನು ಬಳಸಬೇಕು.

ನಾನು ಈ ವಿಷಯವಾಗಿಯೇ ಮಾತಾನಾಡುತ್ತಿದ್ದರೂ, ನಾವು ವಿಪರೀತವಾಗಿ ವಿದೇಶಿ ಪರಿಣಿತರನ್ನು ಬಳಸುತ್ತಿದ್ದೇವೆ. ಅದು ಒಂದು ರೀತಿ ಒಳ್ಳೆಯದೇ ಆದರೂ, ನನ್ನ ಅಭಿಪ್ರಾಯದಲ್ಲಿ ನಾವು ಅತಿ ಮಾಡುತ್ತಿದ್ದೇವೆ, ನಾನಿದನ್ನು ನನ್ನ ಸ್ವಂತ ಅನುಭವದಿಂದ ಹೇಳುತ್ತಿಲ್ಲ, ನಾನು ಒಮ್ಮೆ ಭಾರತದಲ್ಲಿ ಉತ್ತಮ ಇಂಜಿನಿಯರ್‌ಗಳಲ್ಲಿ ಒಬ್ಬರನ್ನು ಸಲಹೆ ಕೇಳಿದಾಗ, ಅವರು ನನಗೆ ಈ ರೀತಿ ಹೇಳಿದರು. ವಿದೇಶಿ ಇಂಜಿನಿಯರ್‌ಗಳನ್ನು ನಾವು ಏಕೆ ಭಾರೀ ಪ್ರಮಾಣದಲ್ಲಿ ಆಮದು ಮಾಡಿಕೊಂಡು ಸಲಹೆಗಳನ್ನು ಪಡೆಯುತ್ತಿದ್ದೇವೆ. ನನಗೆ ಅರ್ಥವಾಗುತ್ತಿಲ್ಲ, ಏನಾದರೂ ಕೆಲಸವಿದ್ದರೆ ನನಗೆ ಹೇಳಿ. ನಮ್ಮ ಇಂಜಿನಿಯರ್‌ಗಳು ಮಾಡುವಂತೆ ನಾನು ನೋಡುತ್ತೇನೆ. ನಾನು ಅಲ್ಲಿಗೆ ಆ ವಿಷಯವನ್ನು ಬಿಡುತ್ತೇನೆ.

ಇಷ್ಟು ಹೇಳಿದ ನಂತರ, ಹಿಂದುಳಿದ ಪ್ರದೇಶಗಳ ಬಗ್ಗೆ ಯೋಜನಾ ಆಯೋಗದ ಅತ್ಯುಪಯುಕ್ತ ಟಿಪ್ಪಣಿ ಮತ್ತು ಅಭಿಪ್ರಾಯವನ್ನು ಈ ಸದನದ ಮತ್ತು ಯೋಜನಾ ಆಯೋಗದ ಗಮನಕೆ ತರಲಿಚ್ಛಿಸುತ್ತೇನೆ. ಈ ಸದನದ ವಿಶೇಷ ಗಮನವನ್ನು ಅಂತಹ ಒಂದು ಪ್ರದೇಶದತ್ತ ಸೆಳೆಯಲು ಇಚ್ಛಿಸುತ್ತೇನೆ. ಈ ಪ್ರದೇಶದ ಬಗ್ಗೆ ನನಗೆ ಪ್ರತ್ಯೇಕ ಆಸಕ್ತಿ ಇದೆ ಮತ್ತು ಪ್ರತಿ ಸದಸ್ಯರಿಗೂ ಇರಬೇಕೆಂದು ಭಾವಿಸುತ್ತೇನೆ. ಆ ಪ್ರದೇಶವೇ ಮಲೆನಾಡು --- ನನಗನಿಸುವಂತೆ ಅದು ಭಾರತದಲ್ಲಿ ಅತ್ಯಂತ ಬೆಲೆಬಾಳುವ ಪ್ರದೇಶ. ಈ ಪ್ರದೇಶಕೆ ತನಗೆ ದೊರೆಯಬೇಕಿದ್ದಷ್ಟು ಆದ್ಯತೆ ದೊರೆತಿಲ್ಲವೆಂದು ಹೇಳಲು ಕ್ಷಮೆ ಕೇಳುತ್ತೇನೆ. ನಾನು ಈ ವಿಷಯ ಏಕೆ ಹೇಳುತ್ತಿದ್ದೇನೆಂದರೆ, ಈ ಪ್ರದೇಶಕೆ ವಿಶೇಷ ಆದ್ಯತೆ ಬೇಕೆಂಬುದು ಯೋಜನಾ ಆಯೋಗಕೆ ತಿಳಿದಿದೆ. ವಾಸ್ತವವಾಗಿ, ಯೋಜನಾ ಆಯೋಗವು ವಿಶೇಷವಾಗಿ ಮಲೆನಾಡಿನ ಪ್ರಶ್ನೆಯನ್ನು ಪರಿಶೀಲಿಸುವಂತೆ ಒಂದು ಸಮಿತಿಯನ್ನು ರಚಿಸಿತ್ತು. ಆ ಸಮಿತಿಯು ಪೂರ್ವಭಾವಿ ವರದಿಯನ್ನು ಮೇಲಕೆ ಕಳುಹಿಸಿತು. ಆಶ್ಚರ್ಯವೆಂದರೆ ಆ ವರದಿ ಮೇಲೆ ಹೋದ ನಂತರ ಎಲ್ಲವೂ ಅಲ್ಲೇ ನಿಂತು ಹೋಯಿತು ---- ನಾನು ಈ ಪ್ರದೇಶದ ಬಗ್ಗೆ ಪ್ರತ್ಯೇಕ ಒತ್ತು ನೀಡುತ್ತೇನೆ. ಏಕೆಂದರೆ, ಈ ಪ್ರದೇಶಕ್ಕೆ ಗರಿಷ್ಠ

ಫಲಿತಾಂಶವನ್ನು ನೀಡುವ ಶಕ್ತಿ ಇದೆ ----- ಈ ಪ್ರದೇಶದಲ್ಲಿ ಸಾಕಷ್ಟು ಮಳೆಯಾಗುತ್ತದೆ, ಇಲ್ಲಿಂದ ಬೇಕಾದಷ್ಟು ಶ್ರೀಗಂಧ ಮತ್ತು ಶ್ರೀಗಂಧದ ಎಣ್ಣೆ, ವೀಳ್ಯದ ಎಲೆ, ಮೆಣಸು, ಏಲಕಿ ದೊರೆಯುತ್ತದೆ. ಎಲ್ಲದಕಿಂತ ಮಿಗಿಲಾಗಿ , ಇಲ್ಲಿಂದ ಶೇಕಡಾ 90 ರಷ್ಟು ಕಾಫಿ ಮತ್ತು ಸ್ವಲ್ಪ ಪ್ರಮಾಣದಲ್ಲಿ ಚಹಾ ಕೂಡ ದೊರೆಯುತ್ತದೆ. ಅತಿ ಹೆಚ್ಚು ವಿದ್ಯುತ್ ಉತ್ಪಾದಿಸುವ ಸಾಮರ್ಥ್ಯವಿರುವ ಪ್ರದೇಶವಿದು ---- ಈ ಪ್ರದೇಶದಲ್ಲಿ ಅತ್ಯುತ್ತಮ ಬಂದರುಗಳಿದ್ದರೂ, ಯಾವುದೂ ಅಭಿವೃದ್ಧಿಯಾಗಿಲ್ಲ. ಈ ಉದ್ದೇಶಕಾಗಿ ಒಂದು ಸಮಿತಿಯನ್ನು ನೇಮಿಸಲಾಗಿತ್ತು. ಆದರೆ ಇಲ್ಲಿ ಕೂಡಾ ಪೂರ್ವಭಾವಿ ವರದಿಯ ನಂತರ ಅದು ನಿಂತು ಹೋಯಿತು. ಅದನ್ನು ಏಕೆ ಮುಂದುವರಿಸಲಿಲ್ಲ ಎಂಬುದು ನನಗೆ ಗೊತ್ತಿಲ್ಲ. ಆದರಿಂದ, ಈ ಪ್ರದೇಶದ ಜನರು, ನ್ಯಾಯವಾಗಿಯೇ ತಮ್ಮ ಭಾವನೆಯನ್ನು ವ್ಯಕ್ತಪಡಿಸಿದ್ದಾರೆ. ಅವರಿಗೆ ಭಾರತದ ಇತರೆ ಪ್ರದೇಶಗಳಿಗಿಂತ ಹೆಚ್ಚಿನ ಆಸಕ್ತಿ, ಅಕರೆ ಮತ್ತು ಸಹಾನುಭೂತಿಯ ಅವಶ್ಯಕತೆ ಇದೆ ಎಂಬುದು ನನ್ನ ಭಾವನೆ. ಈ ವಾಸ್ತವವನ್ನು ಗಣನೆಗೆ ತೆಗೆದುಕೊಳ್ಳಬೇಕಾಗಿದೆ ಮತ್ತು ಯಾವ ರೀತಿಯಲ್ಲಿಯೂ ಈ ಸಮಿತಿಗಳನ್ನು ಕಾರ್ಯನಿರ್ವಹಿಸಲು ಮತ್ತು ವರದಿಗಳನ್ನು ಸಲ್ಲಿಸಲು ಬಿಡದಿರುವುದು ನನಗೆ ದುಃಖ ಮತ್ತು ನಿರಾಶೆಯನ್ನು ತಂದಿದೆ. ಹಣಕಾಸಿನ ಹಂಚಿಕೆಯ ಅಚ್ಚುಕಟ್ಟಿನ ಮಿತಿಯಲ್ಲಿ ಕೈಗೆತ್ತಿಕೊಳ್ಳಲು ಕಾಲ ಮಿಂಚಿಲ್ಲ. 'ಆದ್ದರಿಂದ, ಈ ಪ್ರದೇಶಕೆ ಕೂಡಲೇ ಗಮನಹರಿಸಬೇಕೆಂದು ಒತ್ತಾಯಿಸುತ್ತೇನೆ.

ಮತ್ತೊಂದು ಸಮಾನ ಪ್ರಾಮುಖ್ಯತೆ ಹೊಂದಿರುವ ಪ್ರದೇಶವೆಂದರೆ ಒಣ ಪ್ರದೇಶಗಳು ಈಗ ಅದರ ಕಡೆಗೆ ಸ್ವಲ್ಪ ಗಮನವನ್ನು ನೀಡಲಾಗುತ್ತಿದೆ, ನೀವೆಲ್ಲಾ ಕೇಳಿರುವ ರಾಯಲಸೀಮೆ ಒಂದು ಒಣ ಪ್ರದೇಶ. ಇನ್ನು ಮೈಸೂರು ರಾಜ್ಯದಲ್ಲಿ ಸುಮಾರು ಮೂರು ಜಿಲ್ಲೆಗಳಿವೆ - ಕೋಲಾರ, ಚಿತ್ರದುರ್ಗ ಮತ್ತು ತುಮಕೂರು ಮತ್ತು ಬೊಂಬಾಯಿ, ಬಿಜಾಪುರ ಇತ್ಯಾದಿಗಳ ಮೂರು ಜಿಲ್ಲೆಗಳ ಭಾಗಗಳು. ಇನ್ನು ಹೈದರಾಬಾದ್‌ನಲ್ಲಿ ಸ್ವಲ್ಪ ಭಾಗವಿದೆ. ಹಲವು ಪ್ರದೇಶಗಳು ಫಲವತ್ತಾದ ಮಣ್ಣನ್ನು ಹೊಂದಿದ್ದರೂ, ಬಹಳ ಕಡಿಮೆ ಮಳೆಯಾಗುತ್ತದೆ. ಈ ಪ್ರದೇಶಗಳತ್ತ ಕೂಡಾ ಕೂಡಲೇ ಗಮನ ಹರಿಸಲಾಗುತ್ತದೆಂದು ಆಶಿಸುತ್ತೇನೆ.

ಕೊನೆಯದಾಗಿ, ಈಗಿನ ಪರಿಸ್ಥಿತಿಗಳಲ್ಲಿ ಈ ಯೋಜನೆಗಿಂತ ಉತ್ತಮವಾದುದಿಲ್ಲವೆಂದು ಈ ಸಭೆಗೆ ತಿಳಿಸಲು ಇಚ್ಛಿಸುತ್ತೇನೆ. ಇದು ತೃಪ್ತಿಕರವಾಗಿದೆ ಎಂದು ಯೋಜನೆಕಾರರು ಹೇಳುತ್ತಿಲ್ಲ. ನಾವು ಕೂಡಾ ಆ ದಾವೆ ಮಾಡುತ್ತಿಲ್ಲ. ಈ ಮಾತನ್ನು ಗೌರವಾನ್ವಿತ ಪ್ರಧಾನ ಮಂತ್ರಿಗಳು ಕೂಡಾ ಒಪ್ಪಿದ್ದಾರೆ. ಎಲ್ಲ ವರ್ಗಗಳನ್ನೂ ತೃಪ್ತಿಪಡಿಸಲು ಸಾಧ್ಯವಿಲ್ಲ. ಆದರೇ ಬೃಹತ್ ದೇಶವಾದ ಮತ್ತು ಅತ್ಯಂತ ದೊಡ್ಡ ಪ್ರಜಾಪ್ರಭುತ್ವಕೆ ಯೋಜನೆ ಮಾಡುವ ದಿಸೆಯಲ್ಲಿ ಇದು ಮೊದಲ ಹೆಜ್ಜೆ ಎಂದು ಅವರೇ ಹೇಳಿದ್ದಾರೆ. ನನಗನಿಸಿದ ಮಟ್ಟಿಗೆ ಈಗ ರಚಿಸಿರುವುದು ಉತ್ತಮವಾಗಿದೆ. ಇದನ್ನು ಯಶಸ್ವಿ ಮಾಡಲು ನಾವೆಲ್ಲರೂ ನಮ್ಮ ಶಕ್ತಿ ಮೀರಿ ಶ್ರಮಿಸುತ್ತೇವೆ ಎಂದು ಹೇಳುವಾಗ ನಾನು ಖಂಡಿತವಾಗಿ ಈ ಸದನದ ಎಲ್ಲ ಸಕ್ರಮ ಆಲೋಚನೆಯ ಸದಸ್ಯರ ಭಾವನೆಗಳನ್ನು ಧ್ವನಿಗೂಡಿಸುತ್ತಿದ್ದೇನೆ.

## ರೈಲ್ವೆ ಮುಂಗಡ ಪತ್ರ ಮೇಲಿನ ಕುರಿತು ಚರ್ಚೆ

## 2ನೇ ಮಾರ್ಚ್ 1952

ಹಿಂದುಳಿದ ಪ್ರದೇಶಗಳಿಗೆ ಖಂಡಿತವಾಗಿ ಅವಶ್ಯಕ ಆದ್ಯತೆ ನೀಡಲಾಗುತ್ತದೆ ಎಂಬ ರೈಲ್ವೆ ಮಂತ್ರಿಗಳ ಹೇಳಿಕೆ ಓದಿ ನನಗೆ ಬಹಳ ಸಂತೋಷವಾಯಿತು. ನನ್ನ ಆಸೆ ಎಂದರೆ ಆ ಪ್ರದೇಶಗಳಿಗೆ ಹೆಚ್ಚಿನ ಆದ್ಯತೆ ದೊರೆಯಬೇಕು. ನಿರ್ದಿಷ್ಟವಾದ ಪ್ರದೇಶಗಳ ಬಗ್ಗೆ ಹೇಳುವ ಮೊದಲು ರೈಲ್ವೆ ಮಂತ್ರಿಗಳ ಮತ್ತು ಈ ಸದನದ ಗಮನವನ್ನು ಈ ವಿಷಯದತ್ತ ಸೆಳೆಯಲು ಇಚ್ಛಿಸುತ್ತೇನೆ. ರೈಲ್ವೆ ನಕ್ಷೆಯತ್ತ ಒಮ್ಮೆ ಕಣ್ಣು ಹಾಯಿಸಿದಾಗ ಪಶ್ಚಿಮ ತೀರದಲ್ಲಿ ಯಾವುದೇ ರೈಲ್ವೆ ವ್ಯವಸ್ಥೆ ಕಂಡುಬರುವುದಿಲ್ಲ.

ದೆಹಲಿಯಿಂದ ತಿರುವನಂತಪುರಕೆ ಮೀಟರ್‌ಗೇಜ್ ವಿಷಯ ಬಂದಾಗ ಕಳೆದ ವರ್ಷ ರೈಲು ಸಂಪರ್ಕ ಏರ್ಪಡಿಸುವ ಬಗ್ಗೆ ರೈಲ್ವೆ ಮಂತ್ರಿಗಳು ಸಂತಸದಿಂದ ಪ್ರಸ್ತಾಪ ಮಾಡಿದ್ದರು. ಇವಲ್ಲದೆ ಇನ್ನೆರಡು ಬಿಟ್ಟು ಹೋಗಿರುವ ಕೊಂಡಿಗಳಿವೆ. ಅದರಲ್ಲಿ ಒಂದು ಕಂಡ್ವ ಮತ್ತು ಹಿಂಗೋಲಿ ನಡುವೆ ಈಗಾಗಲೇ ಕೈಗೆತ್ತಿಕೊಳ್ಳಲಾಗಿದೆ. ಆದರೆ, ಮತ್ತೊಂದು ಮಾರ್ಗವಾದ ಚಾಮರಾಜನಗರ ಮತ್ತು ಸತ್ಯಮಂಗಲಂ ಬಗ್ಗೆ ಮಂತ್ರಿಗಳು ಏಕೆ ಮೌನವಾಗಿದ್ದಾರೆ ಎಂದು ನನಗೆ ಗೊತ್ತಿಲ್ಲ. ಅದನ್ನು ಕಾರ್ಯರೂಪಕೆ ತಂದಿದ್ದಾದರೆ ದೆಹಲಿಯಿಂದ ದಕ್ಷಿಣ ಭಾರತದ ತುತ್ತ ತುದಿಯವರೆಗೆ ಮೀಟರ್‌ಗೇಜ್ ಸೌಲಭ್ಯ ಒದಗಿ ಎರಡು ಮೀಟರ್‌ಗೇಜ್ ವಿಭಾಗಗಳನ್ನು ಸೇರಿಸುತ್ತದೆ.

ಮಾನ್ಯರೇ, ಈಗ ಉಳಿದ ತೀರ ಪ್ರದೇಶಗಳಿಗೆ ಸಂಬಂಧಿಸಿದಂತೆ, ನಾನೊಂದು ಸಲಹೆ ನೀಡಲಿಚ್ಛಿಸುತ್ತೇನೆ. ಪಶ್ಚಿಮ ತೀರದ ರಸ್ತೆಯನ್ನು ಈಗ ರಾಷ್ಟ್ರೀಯ ಹೆದ್ದಾರಿಯಾಗಿ ಕನ್ಯಾಕುಮಾರಿಯಿಂದ ಬೊಂಬಾಯಿವರೆಗೂ ಸಿದ್ಧಪಡಿಸಲಾಗುತ್ತಿದೆ ಮತ್ತು ಈಗಾಗಲೇ ಹಲವು ಸೇತುವೆಗಳನ್ನು ಕಟ್ಟಲಾಗಿದೆ. ಬೊಂಬಾಯಿ ಮತ್ತು ಕನ್ಯಾಕುಮಾರಿ ನಡುವೆ ರೈಲು ಮಾರ್ಗವನ್ನು ಆರಂಭಿಸುವ ವಿಷಯವನ್ನು ಪರಿಗಣಿಸುವುದಾಗಿ ನೆನ್ನೆ ರೈಲ್ವೆ ಮಂತ್ರಿಗಳು ಹೇಳಿದ್ದಾರೆ. ನನಗನಿಸಿದಂತೆ ಅದು ಬ್ರಾಡ್‌ಗೇಜ್ ಆಗಿರಬೇಕು, ಏಕೆಂದರೆ ಕೊಚ್ಚಿನ್‌ನಿಂದ ಮಂಗಳೂರು ನಡುವೆ ಈಗಾಗಲೇ ಬ್ರಾಡ್‌ಗೇಜ್ ಮಾರ್ಗವಿದೆ. ಇದು ಕೂಡಾ ಬ್ರಾಡ್‌ಗೇಜ್ ಮಾರ್ಗವಾದಲ್ಲಿ ರಸ್ತೆ ಮತ್ತು ರೈಲ್ವೆ ವಿಭಾಗಗಳು ರಸ್ತೆಗಳಿಗೆ ಮತ್ತು ರೈಲುಮಾರ್ಗಗಳಿಗೆ ಸೇತುವೆ ಕಟ್ಟುವ ಕಾರ್ಯದಲ್ಲಿ ಹೊಂದಾಣಿಕೆ ಮಾಡಿಕೊಳ್ಳ ಬೇಕಿರುವುದಿಲ್ಲ, ಇದರ ಪರಿಣಾಮವಾಗಿ ಹೊಸದಾಗಿ ಸೇತುವೆಗಳನ್ನು ಕಟ್ಟುವ ಅವಶ್ಯಕತೆ ಇರುವುದಿಲ್ಲ ಎಂದೆನಿಸುತ್ತದೆ. ಆದ್ದರಿಂದ, ನನ್ನ ಸಲಹೆಯನ್ನು ಪರಿಗಣಿಸಬೇಕೆಂದು ಒತ್ತಾಯಿಸುತ್ತೇನೆ. ಇದು ಬಹಳ ಹಿಂದುಳಿದಿರುವ ಪ್ರದೇಶಕೆ ಬಹಳ ಉಪಯೋಗವಾಗುತ್ತದೆ.

---

ಲೋಕಸಭೆ ನಡವಳಿಕೆ ದಿ: 2.3.54 ಪುಟ 1125-1132

ನೆನ್ನೆ ರೈಲ್ವೆ ಮಂತ್ರಿಗಳು ಮಲೆನಾಡಿನ ಬಗ್ಗೆ ಪ್ರಸ್ತಾವ ಮಾಡಿದಾಗ ನನಗೆ ಸಂತೋಷವಾಯಿತು. ಈ ಪ್ರದೇಶದಲ್ಲಿ ನನಗೆ ಪ್ರತ್ಯೇಕ ಆಸಕ್ತಿ ಇದೆ. ಈ ವಿಷಯದ ಬಗ್ಗೆ ನಾನೀಗಾಗಲೇ ಸುಮಾರು ಬಾರಿ ಪ್ರಸ್ತಾವ ಮಾಡಿದ್ದೇನೆ ಮತ್ತು ನನಗೆ ಸಂತೋಷವಾಗುವ ವಿಷಯವೆಂದರೆ ಮಲೆನಾಡು ಜನರು ಏರ್ಪಡಿಸಿರುವ ಸಮಾರಂಭಕೆ ರೈಲ್ವೆ ಮಂತ್ರಿಗಳು ಬರಲು ಒಪ್ಪಿದ್ದಾರೆ. ನಾನಾ ದೃಷ್ಟಿಯಿಂದ ಇದೊಂದು ಅತ್ಯಂತ ಮುಖ್ಯ ಪ್ರದೇಶವಾಗಿದೆ. ಹಲವು ಭೂಗೋಳಶಾಸ್ತ್ರಜ್ಞರು ಈ ಪ್ರದೇಶವನ್ನು ಸಮೀಕ್ಷೆ ಮಾಡಿದ್ದಾರೆ, ಎಂದು ತಿಳಿಸಲು ಇಚ್ಛಿಸುತ್ತೇನೆ. ಭಾರೀ ಪ್ರಮಾಣದಲ್ಲಿ ಖನಿಜ ಸಂಪತ್ತಿನ ಎರಡು ನಿಕ್ಷೇಪ ಕೇಂದ್ರಗಳಿವೆ. ಮೊದಲನೆಯದು ಬಿಹಾರ, ಒರಿಸ್ಸಾ, ಹಾಗೂ ಮಧ್ಯಪ್ರದೇಶದಲ್ಲಿ ಮತ್ತು ಎರಡನೆಯದು ಸ್ವಲ್ಪ ಕಡಿಮೆ ಪ್ರಮಾಣದಲ್ಲಿ ಖನಿಜದ ಅದಿರಿರುವ ಮಲೆನಾಡು ಮತ್ತು ಸುತ್ತಲಿನ ನೂರು ಮೈಲಿಯ ಪ್ರದೇಶಗಳು. ಈ ಪ್ರದೇಶವನ್ನು ಸಂಪೂರ್ಣವಾಗಿ ಖನಿಜ ಸಮೀಕ್ಷೆ ಮಾಡಿಸಿದ್ದಲ್ಲಿ ಖಂಡಿತವಾಗಿ ಈ ಪ್ರದೇಶವನ್ನು ಕೈಗೆತ್ತಿಕೊಳ್ಳಬೇಕೆಂದು ರೈಲ್ವೆ ಮಂತ್ರಿಗಳು ಒಪ್ಪಿಕೊಳ್ಳಬೇಕಾಗುತ್ತದೆ. ನಾನು ಪ್ರಸ್ತಾವ ಮಾಡುತ್ತಿರುವ ಪ್ರದೇಶ ನನಗೆ ಗೊತ್ತಿದ್ದು, ಗೋವಾ ಮತ್ತು ಕೊಚ್ಚಿನ್‌ನ ನಡುವೆ ಬರುತ್ತದೆ. ಅದನ್ನು ನಿಜವಾಗಿ ಮಲೆನಾಡು ಎನ್ನುತ್ತಾರೆ, ಅಲ್ಲಿ ಉತ್ತಮ ಬಂದರುಗಳಿವೆ. ಕಾರವಾರವು ವಿಶ್ವದಲ್ಲೇ ಮೂರು ಉತ್ತಮ ಬಂದರುಗಳಲ್ಲಿ ಒಂದೆಂದು ಹೇಳಲಾಗುತ್ತದೆ. ರಾಷ್ಟ್ರದ ಹಿತದೃಷ್ಟಿಯಿಂದ ಈ ಬಂದರನ್ನು ಅಭಿವೃದ್ಧಿ ಮಾಡುವುದು ಅವಶ್ಯಕವೆನಿಸುತ್ತದೆ. ಅದು ಸ್ವಾಭಾವಿಕ ಬಂದರು ಮತ್ತು ನೌಕಾ ತಾಣವಾಗಿರುವುದರಿಂದ ಅದನ್ನು ಅಭಿವೃದ್ಧಿ ಮಾಡಬೇಕಾಗಿದೆ. ಮತ್ತೊಂದು ಈಗಾಗಲೇ ಚಿಕ ವಾಣಿಜ್ಯ ಬಂದರಾಗಿರುವ ಮಂಗಳೂರು, ಅದನ್ನು ಅಭಿವೃದ್ಧಿ ಪಡಿಸಬೇಕಾಗಿದೆ. ಮತ್ತೊಂದು ಬಂದರೆಂದರೆ ಮಲ್ಪೆ. ಅಲ್ಲಿ ಪ್ರತಿವರ್ಷವೂ ಟನ್ನುಗಟ್ಟಲೆ ಮೀನನ್ನು ಹಿಡಿದು ಸಾಗಾಣಿಕೆ ಸೌಲಭ್ಯವಿಲ್ಲದ ಕಾರಣ ಸಮುದ್ರಕೆ ಬಿಡಲಾಗುತ್ತಿದೆ.

ನನ್ನ ಈ ಸಲಹೆಗಳಿಗೆ ಅವಶ್ಯಕ ಪರಿಗಣನೆ ನೀಡಲಾಗುತ್ತದೆಂದು ಆಶಿಸುತ್ತೇನೆ. ಇನ್ನೂ ಹಿಂದುಳಿದಿರುವ ಈ ಪ್ರದೇಶದಲ್ಲಿ ನ್ಯಾಯ ಸಮ್ಮತವಾಗಿ ರೈಲ್ವೇ ಮಾರ್ಗಗಳ ನಿರ್ಮಾಣವಾದರೆ, ಆ ಮಾರ್ಗಗಳನ್ನು ನಾನು ಪಟ್ಟಿ ಮಾಡುತ್ತೇನೆ. ಈಗಾಗಲೇ ನಿಧಾನವಾಗಿದ್ದರೂ ಹಾಸನ ,ಮಂಗಳೂರು ಮಾರ್ಗವನ್ನು ಸಮೀಕ್ಷೆ ಮಾಡುವುದು ನನಗೆ ಸಂತಸ ತಂದಿದೆ. ಈ ಸಂಬಂಧದಲ್ಲಿ ಹೇಳುವುದಾದರೆ ಮಲೆನಾಡಿನ ಪ್ರಮುಖ ಕಾಫಿ ಕೇಂದ್ರವಾಗಿರುವ ಚಿಕ ಮಗಳೂರನ್ನು ಕಡೆಗಣಿಸಲಾಗಿದೆ. ಕಡೂರು ಮತ್ತು ಚಿಕ ಮಗಳೂರನ್ನು ಹಾಸನ - ಮಂಗಳೂರು ರೈಲು ಮಾರ್ಗದಲ್ಲಿ ಸೇರಿಸಬೇಕೆಂದು ನಾವು ಬಲವಾದ ಪ್ರತಿನಿಧಿತ್ವವನ್ನು ಮಾಡಿದ್ದೆವು. ಖಂಡಿತವಾಗಿ ನಮ್ಮ ಮನವಿಯನ್ನು ಮಂತ್ರಾಲಯವು ಸಹಾನುಭೂತಿಯಿಂದ ಪರಿಗಣಿಸುತ್ತಾರೆಂದು ಭಾವಿಸುತ್ತೇನೆ. ಏಕೆಂದರೆ ಕಳೆದ 30 ವರ್ಷಗಳಲ್ಲಿ ಮೈಸೂರು ಸರ್ಕಾರವು ಸುಮಾರು 25 ಲಕ್ಷ ರೂಗಳಷ್ಟು ಮೇಲು ತೆರಿಗೆ ವಸೂಲು ಮಾಡಿದೆ. ಮೈಸೂರು ಸರ್ಕಾರವು ಅದನ್ನು ಬಿಡುಗಡೆ ಮಾಡಿದ್ದರೂ ಯಾವುದೇ ಕೆಲಸ ನಡೆದಿಲ್ಲ. ಈಗ ಮಾಡಿರುವ ಬದಲಾವಣೆಯಲ್ಲಿ ಸ್ವಲ್ಪ ಅನುಕೂಲವಿದೆ

ಎಂಬ ಭಾವನೆಯನ್ನು ರೈಲ್ವೆ ಸಚಿವರು ಆ ಜನರಲ್ಲಿ ಮೂಡಿಸಬೇಕು ಎಂಬುದು ನನ್ನ ಅಭಿಪ್ರಾಯ. ನಾನು ಏಕೆ ಒತ್ತಿ ಹೇಳುತ್ತಿದ್ದೇನೆಂದರೆ, ಈ ಮಾರ್ಗವು ಮಲೆನಾಡಿನ ಹಲವು ಪ್ರದೇಶಗಳನ್ನು ಸಂಪರ್ಕಕೆ ತರುತ್ತದೆ. ಇದೇ ಉದ್ದೇಶದಿಂದ, ಕಾರವಾರ ಮತ್ತು ಹುಬ್ಬಳ್ಳಿಯನ್ನು ಸೇರಿಸುವ ಮತ್ತೊಂದು ಪ್ರಮುಖ ಮಾರ್ಗದ ಬಗ್ಗೆ ಪ್ರಸ್ತಾವ ಮಾಡುತ್ತೇನೆ. ---- ಒಂದು ತುತ್ತ ತುದಿಯಾದ ದಾಂಡೇಲಿಯಿಂದ ಮತ್ತೊಂದು ತುದಿಯಾದ ತಾಳಗುಪ್ಪ ನಡುವೆ ಮತ್ತೊಂದು ರೈಲು ಮಾರ್ಗವಿದೆ, ಇದು ಬಹಳ ಮುಖ್ಯವಾಗಿದ್ದು ಉತ್ತರ ಭಾರತಕೆ ಪರ್ಯಾಯ ಮೀಟರ್ ಗೇಜ್ ಮಾರ್ಗಗಳನ್ನು ಒದಗಿಸುವುದೇ ಅಲ್ಲದೇ ಈ ಪ್ರದೇಶದ ವಿಕಾಸಕೂ ನಾಂದಿಯಾಗುತ್ತದೆ. ಈ ಮಾರ್ಗವನ್ನು ಅದಷ್ಟು ಶೀಘ್ರವಾಗಿ ಕೈಗೆತ್ತಿಕೊಳ್ಳಬೇಕು, ನಾನು ಹಿಂದುಳಿದ ಪ್ರದೇಶದಿಂದ ಬಂದವನು. ಹಿಂದುಳಿದ ಎಂದರೆ ಸಂಪತ್ತು ಮತ್ತು ಶ್ರೀಮಂತಿಕೆಯಿಂದಲ್ಲ, ಆದರೆ ತಾತ್ಸಾರದಿಂದ ಈ ಪ್ರದೇಶಕೆ ಪಕ ದಲ್ಲಿಯೇ ವಿಸ್ತಾರವಾದ ಇಂಟರ್‌ಲ್ಯಾಂಡ್ ಇದ್ದು ಇದು ಬಂದರಿಗೆ ಮತ್ತು ರೈಲ್ವೆಗೂ ನೆರವಾಗುತ್ತದೆ. ಇದನ್ನು ಗಮನದಲ್ಲಿಟ್ಟುಕೊಂಡು ಚಿತ್ರದುರ್ಗ -- ರಾಯದುರ್ಗ ಮಾರ್ಗವನ್ನು ಕೈಗೆತ್ತಿಕೊಳ್ಳಬೇಕು. ಇದು ನನ್ನ ಸ್ವಂತ ಜಿಲ್ಲೆಯಲ್ಲಿದೆ. ಈಗ ತುಂಗಭದ್ರಾ ಯೋಜನೆಯು ಮುಕ್ತಾಯವಾಗಿದ್ದು ಒಳ ಪ್ರದೇಶಗಳಿಗೆ ಸೌಕರ್ಯ ಮಾಡುವುದರಿಂದ ಈ ಮಾರ್ಗವನ್ನು ಕೈಗೆತ್ತಿಕೊಳ್ಳಬೇಕು. ಈ ಮಾರ್ಗವು ಬಹಳ ಪ್ರಮುಖವಾಗಿದ್ದು ಬಂದರುಗಳಿಗೆ ಮತ್ತು ಹಿಂದುಳಿದ ಪ್ರದೇಶಗಳಿಗೆ ಸಹಾಯವಾಗುತ್ತದೆ. ನಾನಿಷ್ಟೆಲ್ಲಾ ವಿಷಯಗಳನ್ನು ಏಕೆ ಹೇಳುತ್ತಿದ್ದೇನೆಂದರೆ, ನಾನು ಕೊಡುವ ಸಲಹೆಗಳು ಅರ್ಥಪೂರ್ಣವಾಗಿರಬೇಕು. ಇಷ್ಟು ಹೇಳಿದ ನಂತರ, ಈ ಮಾರ್ಗಗಳನ್ನು ಆದಷ್ಟು ಶೀಘ್ರವಾಗಿ ಸಮೀಕ್ಷೆ ನಡೆಸಬೇಕೆಂದು ಆಶಿಸುತ್ತೇನೆ.

ಕೊನೆಯದಾಗಿ, ನಾನು ತಿಳಿಸಬಯಸುವ ವಿಷಯವೆಂದರೆ, ಮೈಸೂರು ರೈಲ್ವೆಯನ್ನು ಇತರ ರೈಲ್ವೆಯೊಂದಿಗೆ ಒಗ್ಗೂಡಿಸಿರುವುದರ ಬಗ್ಗೆ ದೂರುಗಳಿವೆ. ಉನ್ನತ ಶ್ರೇಣಿಗಳಲ್ಲಿ ಕೆಲಸ ಮಾಡುವ ಸಿಬ್ಬಂದಿಯವರಿಗೆ ಸರಿಯಾದ ಸಿಬ್ಬಂದಿಯವರು ವೇತನ ಮತ್ತು ಸ್ಥಾನಮಾನಗಳಿಗೆ ಯಾವುದೇ ರೀತಿಯ ತೊಂದರೆ ಮಾಡದಿರುವುದು ರೈಲ್ವೆಯನ್ನು ಒಗ್ಗೂಡಿಸಿದಾಗ ಮಾಡಿಕೊಂಡ ಪ್ರಮುಖ ಕರಾರಾಗಿತ್ತು. ಬಹಳಷ್ಟು ಸಿಬ್ಬಂದಿಯವರಿಗೆ ವೇತನದಲ್ಲಿ ಯಾವುದೇ ತೊಂದರೆಯಾಗಿಲ್ಲವಾದರೂ ಅವರ ಸ್ಥಾನಮಾನದಲ್ಲಿ ಬದಲಾವಣೆಯಾಗಿದೆ. ಈ ರೀತೀಯ ವ್ಯತ್ಯಾಸ ಅನವಶ್ಯಕವಾಗಿದ್ದು, ಈ ವಿಷಯವನ್ನು ಸಂಬಂಧಪಟ್ಟ ಅಧಿಕಾರಿಗಳು ತುರ್ತಾಗಿ ಪರಿಶೀಲಿಸುತ್ತಾರೆಂದು ಆಶಿಸುತ್ತೇನೆ. ನನಗಿನ್ನೂ ಹೆಚ್ಚಿನ ವಿಷಯ ಹೇಳಬೇಕೆಂದಿದೆ ಆದರೆ ಸಮಯದ ಅಭಾವವಿದೆ. ನಾನು ಸೂಚಿಸಿರುವ ರೈಲು ಮಾರ್ಗಗಳು ರೈಲ್ವೇ ಸಚಿವರ ಸೂಕ್ತ ಪರಿಗಣನೆಗೆ ಪಾತ್ರವಾಗುತ್ತದೆಂದು ಮತ್ತೊಮ್ಮೆ ಒತ್ತಿ ಹೇಳುತ್ತೇನೆ.

## ಭಾಗ - 3

## ಮೈಸೂರು ವಿಧಾನಸಭೆ

| | | |
|---|---|---|
| 1. | ರಾಜ್ಯಪಾಲರ ಭಾಷಣಕ್ಕೆ ಗೌರವ ಸೂಚಕವಾಗಿ | 24 ಡಿಸೆಂಬರ್ 1956. |
| 2. | ಅನುದಾನ ಬೇಡಿಕೆಗೆ ಉತ್ತರ --- (ಸಾಮಾನ್ಯ ಆಡಳಿತ) | 12 ಏಪ್ರಿಲ್ 1958. |
| 3. | ಶಿಕ್ಷಿತ ನಿರುದ್ಯೋಗಿಗಳ ಬಗ್ಗೆ --- | 24 ಜುಲೈ 1957. |
| 4. | ಸಚಿವರು ಸಂಪಾದಿಸಿದ ಆಸ್ತಿ ಸಂಪತ್ತುಗಳನ್ನು ನಿಗದಿ ಮಾಡಲು ಆಯೋಗದ ಸ್ಥಾಪನೆ --- | 26 ಫೆಬ್ರವರಿ 1966. |
| 5. | ನಾಗರಿಕಾ ಸೇವಾ ಆಯೋಗ --- | 19 ನವೆಂಬರ್ 1966. |
| 6. | ಆಡಳಿತ ಭಾಷೆ --- | 5 ಸೆಪ್ಟೆಂಬರ್ 1963. |
| 7. | ಆಡಳಿತ ಭಾಷೆ --- ಪ್ರಶ್ನೋತ್ತರ | 29 ಜೂನ್ 1967. |
| 8. | ಕೃಷ್ಣಾ ಗೋದಾವರಿ ನೀರು ಹಂಚಿಕೆ --- | 1 ಏಪ್ರಿಲ್ 1963. |
| 9. | ಗಡಿಪವಾದ --- | 26 ಫೆಬ್ರವರಿ 1966. |
| 10. | ಗಡಿವಿವಾದ --- | 26 ಜುಲೈ 1966. |
| 11. | ಅವಿಶ್ವಾಸ ಪ್ರಸ್ತಾವ --- | 9 ಅಕ್ಟೋಬರ್1963. |
| 12. | ಅವಿಶ್ವಾಸ ಪ್ರಸ್ತಾವ --- | 11 ಜನವರಿ 1965. |
| 13. | ಮುಖ್ಯಮಂತ್ರಿ ಹಾಗೂ ಪಕ್ಷಾಧ್ಯಕ್ಷರಾಗಿ ದ್ವಂದ್ವ ಪಾತ್ರ --- | 21 ಫೆಬ್ರವರಿ 1968. |
| 14. | ಬೀಳ್ಕೊಡುಗೆ ಸಮಾರಂಭ | 27 ಮಾರ್ಚ್ 1957. |

## ಭಾಗ - 3
## ಮೈಸೂರು ವಿಧಾನ ಸಭೆ

## ರಾಜ್ಯಪಾಲರ ಭಾಷಣಕ್ಕೆ ಗೌರವ ಸೂಚಕವಾಗಿ

## 24ನೇ ಡಿಸೆಂಬರ್ 1956

ಸದನದ ಎಲ್ಲಾ ಸದಸ್ಯರಿಂದ ಮತ್ತು ಹೊಸ ರಾಜ್ಯದ ಭಾಗ ಭಾಗವಾಗಿ ಐದು ಪ್ರಾಂತ್ಯಗಳ ಪ್ರತಿನಿಧಿಗಳಿಂದ ಹೊಸ ರಾಜ್ಯ ರಚನೆಯಾಗಿರುವ ಬಗ್ಗೆ ಯಾವುದೇ ರೀತಿಯ ಅಸಮ್ಮತಿ ಇಲ್ಲದಿರುವುದು ನನಗೆ ಬಹಳ ಸಂತಸ ತಂದಿದೆ. ನಿಜವಾಗಿಯೂ, ಸಭೆಯಲ್ಲಿ ಮಾತನಾಡಿದ ಎಲ್ಲಾ ಸದಸ್ಯರೂ ಸಂಪೂರ್ಣವಾಗಿ ಹೊಸ ರಾಜ್ಯದ ಪರವಾಗಿ ಮಾತನಾಡಿದ್ದಾರೆ. ಪ್ರತಿಯೊಬ್ಬ ಸದಸ್ಯರು ತಮ್ಮ ಉತ್ಸಾಹ, ತೃಪ್ತಿ ಮತ್ತು ಸಂತೋಷದ ಸ್ವಾಗತವನ್ನು ವ್ಯಕ್ತಪಡಿಸಿದ್ದಾರೆ. ಈ ಹೊಸ ರಾಜ್ಯದ ರಚನೆಯನ್ನು ಎಲ್ಲಾ ರಾಜಕೀಯ ಪಕ್ಷಗಳೂ ಸ್ವಾಗತಿಸಿವೆಯೆಂದು ತಿಳಿದು ಹೊಸ ರಾಜ್ಯದ ಉದಯಕ್ಕಾಗಿ ಶ್ರಮಿಸಿದ ನಮಗೆಲ್ಲರಿಗೂ ಸಂತಸ ತಂದಿದೆ. ಈ ಸಂದರ್ಭದಲ್ಲಿ ನಮಗಿಂತ ಮೊದಲು ಈ ಚಳುವಳಿಯನ್ನು ಕೈಗೆತ್ತಿಕೊಂಡು ಮುನ್ನಡೆಸಿ ಕರ್ನಾಟಕ ರಾಜ್ಯದ ರಚನೆಯ ಬೀಜಗಳನ್ನು ಬಿತ್ತಲು ಜವಾಬ್ದಾರರಾದ ಎಲ್ಲರನ್ನೂ ಸ್ಮರಿಸಿಕೊಳ್ಳಲು ಈ ಅವಕಾಶವನ್ನು ಉಪಯೋಗಿಸಿಕೊಳ್ಳುತ್ತೇನೆ. ಮಾನ್ಯರೇ, ಈ ಗುರಿಯನ್ನು ಸಾಧಿಸಲು ನಮಗಿಂತ ಮೊದಲು ಶ್ರಮಪಟ್ಟ, ನಮ್ಮನ್ನಗಲಿದ ಮತ್ತು ಇಂದು ನಮ್ಮೊಂದಿಗಿರುವ ಎಲ್ಲರಿಗೂ ನನ್ನ ಧನ್ಯವಾದಗಳನ್ನು ಅರ್ಪಿಸಲು ಈ ಸದವಕಾಶವನ್ನು ಬಳಸಿಕೊಳ್ಳುತ್ತೇನೆ.

ಮಾನ್ಯರೇ, ಹೊಸ ರಾಜ್ಯ ರಚನೆಯಾಗಿದ್ದರೂ ಇನ್ನೂ ಬಹಳಷ್ಟು ಪ್ರದೇಶಗಳಲ್ಲಿ ಕನ್ನಡ ಮಾತನಾಡುವ ಜನ ಹೊರಗೆ ಉಳಿದಿದ್ದಾರೆ. ಅವರಿನ್ನೂ ನಮ್ಮನ್ನು ಸೇರಬೇಕಾಗಿದೆ ಎಂಬುದು ಸತ್ಯ. ಈ ಪ್ರದೇಶಗಳನ್ನು ಹೊಸ ರಾಜ್ಯಗಳಲ್ಲಿ ಸೇರಿಸಿಕೊಳ್ಳಲು ನಾನು ಕೇಂದ್ರ ಸರ್ಕಾರ ಮತ್ತು ರಾಜ್ಯಗಳ ಮುಖ್ಯ ಮಂತ್ರಿಗಳೊಡನೆ ವ್ಯವಹರಿಸುತ್ತಿದ್ದೇನೆ ಎಂದು ಈ ಸಭೆಗೆ ತಿಳಿಸಲು ಇಚ್ಛಿಸುತ್ತೇನೆ.

ಭಾಷಾವಾರು ಅಲ್ಪಸಂಖ್ಯಾತ ವರ್ಗಗಳ ಹಿತಾಸಕ್ತಿಗೆ ಧಕ್ಕೆ ಬರುವಂತಹ ಯಾವುದೇ ಕಾರ್ಯವನ್ನು ಕೈಗೆತ್ತಿಕೊಳ್ಳುವುದಿಲ್ಲವೆಂಬ ಆಶ್ವಾಸನೆಯನ್ನು ನೀಡಲು ಇಚ್ಛಿಸುತ್ತೇನೆ. ಅವರನ್ನು ತಕ್ಕ ಗಣನೆ ಮತ್ತು ಅನುಕಂಪದಿಂದ ನೋಡಿಕೊಳ್ಳಲಾಗುತ್ತದೆ. ನಮ್ಮಲ್ಲಿ ಬಹಳಷ್ಟು ಮರಾಠಿ ಭಾಷೆ ಮಾತನಾಡುವ ಪ್ರಾಂತ್ಯಗಳಿವೆ. ಅವರು ಬೊಂಬಾಯಿ ಪ್ರಾಂತ್ಯಕ್ಕೆ ಸೇರಲು ಇಚ್ಛಿಸುತ್ತಾರೋ ಇಲ್ಲವೋ ಎಂಬ ವಿಷಯದ ಬಗ್ಗೆ ಸಂಶಯವಿದ್ದರೂ, ಅವರು ನಮ್ಮೊಡನೆ ಇರುವವರೆಗೂ, ಅವರನ್ನು ನಾವು ಅಕ್ಕರೆ ಮತ್ತು ಆದರದಿಂದ ನೋಡಿಕೊಳ್ಳಬೇಕು.

ವಿಧಾನ ಸಭೆ ನಡವಳಿಕೆ: ದಿ. 24-12-56 ಪುಟ 223-230

ಅಂತಿಮ ವಿಶ್ಲೇಷಣೆಯಲ್ಲಿ ಕೆಲವು ಮರಾಠಿ ಮಾತನಾಡುವ ಪ್ರದೇಶಗಳು ಅಥವಾ ತೆಲುಗು ಮಾತನಾಡುವ ಪ್ರದೇಶಗಳೂ ಹೋಗಲು ಸಾಧ್ಯವಾಗದೇ ಇರಬಹುದು. ಅವರ ಭಾಷೆ ಮತ್ತು ಹಿತಾಸಕ್ತಿಗಳಿಗೆ ಯಾವುದೇ ತೊಂದರೆ ಬರುವುದಿಲ್ಲವೆಂಬ ಆಶ್ವಾಸನೆಯನ್ನು ನೀಡುತ್ತೇನೆ. ಅವರನ್ನು ತೃಪ್ತಿಪಡಿಸುವ ಮಟ್ಟಕ್ಕೆ ಹೋಗಲು ನಾನು ಸಿದ್ಧನಿದ್ದೇನೆ. ಈ ಆಶ್ವಾಸನೆಯನ್ನು ನಾನು ಸಂಪೂರ್ಣ ಜವಾಬ್ದಾರಿಯಿಂದ ನೀಡುತ್ತಿದ್ದೇನೆ.

ಮಂತ್ರಿಗಳು ಬಹುತೇಕ ಪ್ರವಾಸದಲ್ಲಿರುತ್ತಾರೆ, ಅದರಲ್ಲೂ ಒಬ್ಬರಿಗಿಂತ ಹೆಚ್ಚು ಮಂತ್ರಿಗಳು ಪ್ರವಾಸದಲ್ಲಿರುತ್ತಾರೆಂಬ ವಿಮರ್ಶೆಯು ಸರ್ಕಾರದ ವಿರುದ್ಧ ಮಾಡಲಾಗಿದೆ. ಮಾನ್ಯರೇ, ಅದು ನಮ್ಮ ವಿರುದ್ಧ ಮಾಡಬಹುದಾದ ಸರಿಯಾದ ಆರೋಪಣೆ ಅಲ್ಲವೆಂದು ನನಗನ್ನಿಸುತ್ತದೆ. ವಾಸ್ತವವಾಗಿ, ಕೇವಲ ಅತ್ಯಾವಶ್ಯಕ ಪರಿಸ್ಥಿತಿಗಳಲ್ಲದೇ ಬೇರಾವ ಪರಿಸ್ಥಿತಿಯಲ್ಲೂ ಕಾರ್ಯಸ್ಥಾನದಿಂದ ಹೊರಗೆ ಹೋಗಬಾರದೆಂಬ ವಿಷಯವನ್ನು ನಾವು ಮನಗಂಡಿದ್ದೇವೆ. ಈ ವಿಷಯವನ್ನು ನಾನು ಹಲವಾರು ಹೇಳಿಕೆಗಳಲ್ಲಿ ಸ್ಪಷ್ಟಪಡಿಸಿದ್ದೇನೆ. ಸಾರ್ವಜನಿಕ ಸಭೆಗಳಲ್ಲಿ ಮತ್ತು ಆಪ್ತ ಮಿತ್ರರೊಡನೆ ಚರ್ಚಿಸುವಾಗ, ಮಂತ್ರಿಗಳು ಗುಂಪು ಗುಂಪಾಗಿ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಹೋಗುವುದು ಅಪೇಕ್ಷಣೀಯವಲ್ಲವೆಂಬ ವಿಷಯವನ್ನು ತಿಳಿಸಿದ್ದೇನೆ. ಆದರೆ ಅರ್ಥಮಾಡಿಕೊಳ್ಳಬೇಕಾದ ವಿಷಯವೆಂದರೆ, ನಮ್ಮಲ್ಲಿ ಒಬ್ಬರಿಬ್ಬರಿಗೆ ಬಿಟ್ಟರೆ ಹೊಸದಾಗಿ ಕೂಡಿಬಂದಿರುವ ಐದು ಪ್ರದೇಶಗಳ ಬಗ್ಗೆ ಬಹಳಷ್ಟು ಜನಕ್ಕೆ ಬಹಳ ಕಡಿಮೆ ವಿಷಯ ಗೊತ್ತಿದೆ. ಹಳೆಯ ಮೈಸೂರು ರಾಜ್ಯದ ಮಿತ್ರರಿಗೆ ಅವರ ರಾಜ್ಯದ ಹೊರಗಿನ ವಿಷಯಗಳ ಬಗ್ಗೆ ಏನೂ ಗೊತ್ತಿಲ್ಲ, ಗೊತ್ತಿದರೂ ಬಹಳ ಕಡಿಮೆ. ಹೊರಗಿನಿಂದ ಬಂದು ಮಂತ್ರಿಗಳಾಗಿರುವ ಮಿತ್ರರಿಗೆ ಹಳೆಯ ಮೈಸೂರು ರಾಜ್ಯದ ಬಗ್ಗೆ ಸ್ವಲ್ಪ ಮಾಹಿತಿ ಇದೆ. ಅವಶ್ಯಕವಾದಲ್ಲಿ ದೂರದೂರದ ಪ್ರದೇಶಗಳನ್ನು ಸಂಚರಿಸಿ, ಪ್ರತಿ ಭಾಗಕ್ಕೂ ಭೇಟಿ ನೀಡಿ ಸ್ಥಳೀಯ ಸಮಸ್ಯೆಗಳನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸುವಂತೆ ನಾನು ಹೇಳಿದ್ದೇನೆ. ಅವರು ಪ್ರವಾಸ ಕೈಗೊಂಡರೆ ಯಾರಿಗೂ ಅಸಮಾಧಾನವಾಗಲು ಸಾಧ್ಯವಿಲ್ಲ. ನಿಜವಾಗಿಯೂ ಮೂಲ ವ್ಯಾಪ್ತಿಗಿಂತ ಎರಡು ಪಟ್ಟು ಹಾಗೂ ಜನಸಂಖ್ಯೆಯಲ್ಲಿ ಎರಡುಪಟ್ಟು ದೊಡ್ಡದಾಗಿರುವ ಹೊಸ ರಾಜ್ಯವನ್ನು ತಿಳಿದುಕೊಳ್ಳಲು ಬರುವ ಹೊಸ ಮಂತ್ರಿಗಳಿಗೆ ಸ್ವಾಗತ ನೀಡಬೇಕು ಆರಂಭ ಘಟ್ಟದಲ್ಲಿ ಎಲ್ಲಾ ಭಾಗಗಳಿಗೂ ಭೇಟಿ ನೀಡಿ ಆ ಪ್ರದೇಶಗಳು ಎದುರಿಸುತ್ತಿರುವ ಸಮಸ್ಯೆಗಳನ್ನು ಅರ್ಥಮಾಡಿಕೊಳ್ಳುವ ಅವಶ್ಯಕತೆ ಖಂಡಿತ ಇದೆ.

ನಾವೆಲ್ಲರೂ ಒಂದುಗೂಡಿರುವ ಈ ಸಮಯದಲ್ಲಿ ನಾವು ನಾನಾ ಸಮಸ್ಯೆಗಳನ್ನು ಎದುರಿಸಬೇಕಾಗಿದೆ ಎಂಬುದು ನಿಜ. ಮೊಟ್ಟ ಮೊದಲಿಗೆ ವೇತನ ಶ್ರೇಣಿಗಳಲ್ಲಿ ವ್ಯತ್ಯಾಸವಿದೆ. ಇದು ನಿಜ ಕೂಡ. ನಾನು ಮೈಸೂರಿನಲ್ಲಿ ನಡೆದ ಒಂದು ರಾಜಕೀಯ ಸಮ್ಮೇಳನದಲ್ಲಿ ಮೈಸೂರಿನ ಅಧಿಕಾರಿಗಳ ವೇತನ ಶ್ರೇಣಿಯನ್ನು ಮದ್ರಾಸ್ ವೇತನ ಶ್ರೇಣಿಯ ಮಟ್ಟಕ್ಕೆ

ಏರಿಸುತ್ತೇನೆಂದು ಹೇಳಿದ್ದೆನೆಂದು ತಪ್ಪು ಆಪಾದನೆ ಹೊರಿಸಿ ಅದನ್ನು ದೊಡ್ಡದಾಗಿ ಮಾಡಿದ್ದಾರೆ. ವಾಸ್ತವವಾಗಿ, ಮದ್ರಾಸ್ ವೇತನ ಶ್ರೇಣಿಯನ್ನು ಒಪ್ಪಿಕೊಂಡರೆ ನಮಗಾಗುವ ಅಧಿಕವೆಚ್ಚ 4 ಕೋಟಿ ರೂಪಾಯಿಗಳು ಮತ್ತು ಬೊಂಬಾಯಿನ ವೇತನ ಶ್ರೇಣಿ ಒಪ್ಪಿಕೊಂಡರೆ ಅಧಿಕ ವೆಚ್ಚ 7 ಕೋಟಿ ರೂಪಾಯಿಗಳು ಎಂದು ಹೇಳಿದ್ದೆ, ನಾವು ಸಮಸ್ಯೆಯನ್ನು ಆದಷ್ಟು ನ್ಯಾಯಸಮ್ಮತವಾಗಿ ಇತ್ಯರ್ಥಗೊಳಿಸಲು ಯತ್ನಿಸುತ್ತಿರುವಾಗ ಇದರಲ್ಲಿ ನಮ್ಮ ಮಿತ್ರರಿಗೆ ಕಂಡುಬರುತ್ತಿರುವ ಕೆಡಕು ಏನೆಂಬುದು ನನಗೆ ತಿಳಿಯದು. ನಾವು ಈ ವಿಷಯವನ್ನು ಪರಿಶೀಲಿಸುತ್ತಿದ್ದೇವೆ ಮತ್ತು ಸರ್ಕಾರವು ನ್ಯಾಯಸಮ್ಮತವಾದ ರೀತಿಯಲ್ಲಿ ವೇತನ ಶ್ರೇಣಿಯನ್ನು ಹೊಂದಿಸುತ್ತೇವೆಂದು ಗೌರವಾನ್ವಿತ ಸದಸ್ಯರಿಗೆ ಆಶ್ವಾಸನೆ ನೀಡುತ್ತೇನೆ. ನಾನು ಸಂಬಂಧಿಸಿದ ಎಲ್ಲರಲ್ಲೂ, ಪ್ರತ್ಯೇಕವಾಗಿ, ಹಳೆಯ ಮೈಸೂರು ರಾಜ್ಯದವರಿಗೆ ಮನವಿ ಮಾಡುವುದೇನೆಂದರೆ ಹೊಸ ರಾಜ್ಯದ ರಚನೆಯಿಂದಾಗಿ ಅವರಿಗೆ ಲಾಭವಾಗುತ್ತದೆ. ಅಂದಿನ ಮಂತ್ರಿವರ್ಗವು ಹಲವು ಅನುಕೂಲಗಳನ್ನು ಪ್ರಕಟ ಮಾಡಿದೆ. ಅದು ಮೊದಲಿಗಿಂತ ಸ್ವಲ್ಪ ಹೆಚ್ಚಾಗಿದ್ದು, ಹೊಸ ಸರ್ಕಾರವು ಪರಿಸ್ಥಿತಿಯನ್ನು ಮೊದಲಿಗಿಂತ ಉತ್ತಮಗೊಳಿಸುತ್ತದೆ. ನಾವು ಭಾರೀ ಪ್ರಮಾಣದಲ್ಲಿ ಅವರ ಎಲ್ಲಾ ಬೇಡಿಕೆಗಳನ್ನೂ ಪೂರೈಸಲಾಗುವುದಿಲ್ಲ ಎಂಬುದು ಸತ್ಯ ಸಂಗತಿ. ಬೊಂಬಾಯಿ ವೇತನ ಶ್ರೇಣಿಯುನ್ನು ಈಗಿನ ಪರಿಸ್ಥಿತಿಯುಲ್ಲಿ ಒಪ್ಪಿಕೊಳ್ಳಲಾಗುವುದಿಲ್ಲ. ಆದರೂ ನಾವು ಸರಿಯಾದ ದಿಕ್ಕಿನಲ್ಲಿ ನಡೆಯುತ್ತಿದ್ದೇವೆ, ಅಧಿಕ ವೆಚ್ಚವನ್ನೂ ಹೊರುವ ಜವಾಬ್ದಾರಿ ತೆಗೆದುಕೊಳ್ಳುವಾಗ, ಅದನ್ನು ಹೊರುವ ನಮ್ಮ ಸಾಮರ್ಥ್ಯ ಏನು ಎಂಬುದನ್ನು ನೋಡಿಕೊಳ್ಳಬೇಕು. ಈ ಎಲ್ಲಾ ಅಂಶಗಳೂ ನಮ್ಮ ಪರಿಶೀಲನೆಯಲ್ಲಿದೆ ಮತ್ತು ನಿಮ್ಮ ಜೀವನವು ಯೋಗ್ಯವಾಗಿರಲು ಅವಶ್ಯಕವಾಗಿರುವ ಎಲ್ಲಾ ಅನುಕೂಲಗಳನ್ನು ಒದಗಿಸುತ್ತೇವೆಂದು ಭರವಸೆ ನೀಡುತ್ತೇನೆ. ಸಾಮಾನ್ಯನ ಜೀವನ ಮಟ್ಟವನ್ನು ಉತ್ತಮಗೊಳಿಸಲು ಹೋರಾಡುವವರಲ್ಲಿ ನಾವೂ ಒಬ್ಬರಾಗಿದ್ದು, ಅವರ ಜೀವನ ಉತ್ತಮಗೊಳ್ಳುವಂತೆ ನೋಡುತ್ತೇವೆ. ಹೊಸ ರಾಜ್ಯದ ಸೇವೆಗೆ ಇಲ್ಲಿ ಸೇರಿರುವ ಎಲ್ಲರೂ ಈ ಗುರಿಯನ್ನು ಗಮನದಲ್ಲಿಟ್ಟುಕೊಂಡು ತುಂಬು ಹೃದಯದಿಂದ ಶ್ರಮಿಸುತ್ತೀರೆಂದು ಭಾವಿಸುತ್ತೇನೆ.

ನಮ್ಮ ಅವಶ್ಯಕ ಅಭಿವೃದ್ಧಿಯ ಹಾದಿಯಲ್ಲಿ ಅಡ್ಡಲಾಗಿರುವ ಅತಿ ದೊಡ್ಡ ತೊಂದರೆ ಎಂದರೆ ಅವಶ್ಯಕ ರಸ್ತೆ ಮತ್ತು ರೈಲು ಮಾರ್ಗದ ಕೊರತೆ, ಪಶ್ಚಿಮ ತೀರದ ರಸ್ತೆಯು ಕೇವಲ ನಮ್ಮ ರಾಜ್ಯದ ದೃಷ್ಟಿಯಿಂದಲ್ಲದೇ ಇಡೀ ಭಾರತದ ದೃಷ್ಟಿಯಿಂದಲೂ ಅತ್ಯಂತ ಪ್ರಮುಖ ಕೊಂಡಿಯಾಗಿದೆ. ಕೇಂದ್ರ ಸರ್ಕಾರವು ನಮಗೆ ತೀರ ಪ್ರದೇಶಗಳಲ್ಲಿ ಸೇತುವೆಗಳನ್ನು ನಿರ್ಮಿಸಲು ಅನುಮತಿ ನೀಡಿರುವುದು ನನಗೆ ಸಂತಸವಾಗಿದೆ ಎಂದು ತಿಳಿಸಲು ಇಚ್ಛಿಸುತ್ತೇನೆ. ಮಲೆನಾಡು ಪ್ರದೇಶ ಬಹಳ ಅಭಿವೃದ್ಧಿ ಹೀನವಾಗಿದ್ದು ಸಾಕಷ್ಟು ರೈಲು ಮಾರ್ಗ ಮತ್ತು ರಸ್ತೆಗಳನ್ನು ನಿರ್ಮಿಸಬೇಕಾಗಿದೆ. ಇದೇ ಮಾತು ಪೂರ್ವಭಾಗದ ಒಳ ಪ್ರದೇಶಗಳಿಗೂ ಅನ್ವಯಿಸುತ್ತದೆ. ಕೈಗಾರಿಕೆಗಳ ಬಗ್ಗೆ ಹೇಳುವುದಾದರೆ, ಎಲ್ಲಿಯವರೆಗೆ ಅವಶ್ಯಕ ವಿದ್ಯುತ್ ಲಭಿಸುವುದಿಲ್ಲವೋ, ಅಲ್ಲಿಯವರೆಗೆ ನಾವು ಕೈಗಾರಿಕೆಗಳನ್ನು ಸ್ಥಾಪಿಸುವುದು ಕಷ್ಟವಾಗುತ್ತದೆ.

ಆದರೂ, ನಾವು ಕೈಗಾರಿಕೆಗಳ ಬಗ್ಗೆ ಆಲೋಚಿಸಿದ್ದೇವೆ ಮತ್ತು ಹಲವು ಕಡೆ ಸ್ಥಾಪನೆಯೂ ಮಾಡಿದ್ದೇವೆ.

ಮಾನ್ಯರೇ, ಸಣ್ಣ ಕೈಗಾರಿಕೆಗಳಿಗೆ ಸಂಬಂಧಿಸಿದಂತೆ, ನನಗನಿಸುವಂತೆ, ಯಾವುದೇ ರಾಜ್ಯಕ್ಕಿಂತ ಕರಕುಶಲ ಮತ್ತು ಸಣ್ಣ ಕೈಗಾರಿಕೆಯ ಅಭಿವೃದ್ಧಿಯ ಅವಕಾಶಗಳು ಹೊಸ ರಾಜ್ಯದಲ್ಲಿದೆ. ಈ ರಾಜ್ಯದಲ್ಲಿ ಸುಮಾರು ಒಂದೂವರೆ ಲಕ್ಷ ನೇಯ್ಗೆ ಯಂತ್ರಗಳಿವೆ ಮತ್ತು ಇದರ ಉತ್ಪನ್ನಗಳಿಗೆ, ಪ್ರತ್ಯೇಕವಾಗಿ ಬೊಂಬಾಯಿ ಕರ್ನಾಟಕ ಕ್ಷೇತ್ರದಲ್ಲಿ ತಯಾರಾಗುವ ಸೀರೆ ಮತ್ತು ಕುಪ್ಪಸಗಳಿಗೆ ಭಾರೀ ಬೇಡಿಕೆ ಇದೆ. ನಾವು ಕರ್ನಾಟಕದಲ್ಲಿ ಸಾವಿರಾರು ವರ್ಷಗಳಿಂದ ನೂಲು ದಾರವನ್ನು ತಯಾರಿಸಿ ಹೆಣೆದು ವಿದೇಶಗಳಿಗೆ ರಫ್ತು ಮಾಡುತ್ತಿದ್ದೇವೆ.

ಈ ಪ್ರದೇಶಕ್ಕೆ ಸಂಬಂಧಿಸಿದಂತೆ ಹಲವಾರು ವಿಶೇಷ ಕರಕುಶಲತೆಗಳಿವೆ. ಮೈಸೂರಿನ ಒಳಗೆ ಮತ್ತು ಹೊರಗೆ, ನಾನಾ ಭಾಗಗಳಲ್ಲಿ ತಯಾರಾಗುವ ಶ್ರೀಗಂಧ ಮತ್ತು ದಂತದ ಕೆತ್ತನೆ, ಮರದ ಕೆತ್ತನೆ ಮತ್ತು ಲೋಹಗಳಿಂದ ತಯಾರಾಗುವ ವಸ್ತುಗಳಿಗೆ ವಿದೇಶಿ ಮಾರುಕಟ್ಟೆಗಳಲ್ಲಿ ಸಿದ್ಧ ಬೇಡಿಕೆ ಇದೆ. ನಮ್ಮ ಗುಡಿ ಕೈಗಾರಿಕೆಯಲ್ಲಿ ತಯಾರಾಗುವ ನಾನಾ ಕರಕುಶಲಗಳನ್ನು ಪಟ್ಟಿಮಾಡಲು ನಾನು ಇಚ್ಛಿಸುವುದಿಲ್ಲ, ಅವು ಪ್ರೋತ್ಸಾಹವಿಲ್ಲದೆ ಸಹಾಯಕ್ಕಾಗಿ ಯಾಚಿಸುತ್ತಿವೆ. ಅವನ್ನು ಕಾಪಾಡುವುದು ನಮ್ಮ ಜವಾಬ್ದಾರಿಯಾಗಿದೆ.

ವ್ಯವಸಾಯಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ, ಹಳೆಯ ಮೈಸೂರಿನ ಸುಮಾರು ಭಾಗಗಳು ಹಿಂದುಳಿದಿವೆ. ಹಳೆಯ ಮೈಸೂರಿನ ಹೊರಗಿನ ಪ್ರದೇಶಗಳು ವ್ಯವಸಾಯದಲ್ಲಿ ಒಳ್ಳೆಯ ಪ್ರಗತಿ ಸಾಧಿಸಿವೆ. ಇದರ ಪರಿಣಾಮವಾಗಿ ರಾಜ್ಯದ ವಿವಿಧ ಪ್ರದೇಶಗಳ ಅಭಿವೃದ್ಧಿಯಲ್ಲಿ ಭಾರೀ ವ್ಯತ್ಯಾಸ ಕಂಡುಬರುತ್ತದೆ. ಇದೆಲ್ಲವನ್ನೂ ಹೋಗಲಾಡಿಸಿ ಸಮತೋಲನವಾದ ಅಭಿವೃದ್ಧಿಯನ್ನು ಸಾಧಿಸಬೇಕು ಆದರೆ ಇದಕ್ಕೆ ಸಮಯ ಬೇಕಾಗುತ್ತದೆ.

ನಮ್ಮಲ್ಲಿ ದೊರೆಯುವ ವೈವಿಧ್ಯ ಸ್ವಾಭಾವಿಕ ಸಂಪನ್ಮೂಲಗಳ ಬಗ್ಗೆ ಮಾತನಾಡುವುದಾದರೆ, ಅರಣ್ಯ ಸಂಪತ್ತಾಗಿರಲಿ, ಖನಿಜ ಸಂಪತ್ತಾಗಿರಲಿ, ಸಮುದ್ರ ತೀರ ಮತ್ತು ಮಣ್ಣು, ನದಿಗಳು ಬೇರೆ ಯಾವುದೇ ರಾಜ್ಯಕ್ಕೆ ಹೋಲಿಸಿದರೆ, ಪ್ರತಿಯೊಂದು ವಿಷಯದಲ್ಲೂ, ಗಾತ್ರ ಮತ್ತು ವೈವಿಧ್ಯತೆಯ ಆಧಾರದ ಮೇಲೆ ಬಹುಶಃ ಭಾರತದ ಎಲ್ಲಾ ರಾಜ್ಯಗಳಿಗಿಂತ ಕರ್ನಾಟಕ ಅಗ್ರಸ್ಥಾನ ಪಡೆದಿದೆ. ಮಾನ್ಯರೇ, ಈ ಸಂಪನ್ಮೂಲಗಳನ್ನು ರಾಜ್ಯದ ಒಳಿತಿಗಾಗಿ ಮತ್ತು ಜನರ ಸೇವೆಗಾಗಿ ಬಳಸುವುದು ನಮ್ಮ ಮೊದಲ ಮತ್ತು ಮೂಲ ಗುರಿಯಾಗಿದೆ. ಈ ದಿಸೆಯಲ್ಲಿ ದುಡಿಯಲು ಸದನದ ಪ್ರತಿ ಸದಸ್ಯರಿಗೂ ಆಹ್ವಾನ ನೀಡುತ್ತೇನೆ.

## ಅನುದಾನ ಬೇಡಿಕೆಗೆ ಉತ್ತರ : ಸಾಮಾನ್ಯ ಆಡಳಿತ

12ನೇ ಏಪ್ರಿಲ್ 1958

ಸರಕಾರವು ಹಳೆಯ ಮೈಸೂರು ಮತ್ತು ಹೊಸ ಮೈಸೂರಿನ ನಡುವೆ ಯಾವುದೇ ವ್ಯತ್ಯಾಸ ಮಾಡುವುದಿಲ್ಲವೆಂದು ಹೇಳಬಯಸುತ್ತೇನೆ. ನಾವೆಲ್ಲರೂ ಬೇರೆ ಮಾಡಲಾಗದಂತಹ ಐಕ್ಯತೆಯಿಂದಿರುವಾಗ ಸರಕಾರ ಅಥವಾ ಯಾರೇ ಆಗಲಿ ಅಧಿಕಾರಿಗಳ ನಡುವೆ ಯಾವುದೇ ರೀತಿಯ ಅನುಮಾನಕಾರಕ ಅಥವಾ ಕ್ರೋಧ ಬೆಳೆಸುವ ಪ್ರಯತ್ನ ನಡೆಸುತ್ತಿದೆ ಎಂದು ಆಲೋಚಿಸುವಲ್ಲಿ ಯಾವುದೇ ಅರ್ಥವಿಲ್ಲ. ಖಂಡಿತವಾಗಿಯೂ ಈ ಕಾರಣದಿಂದಾಗಿ ಅಸಮರ್ಥತೆಗೆ ಎಡೆಮಾಡಿದೆ ಎಂದು ನಾನು ಭಾವಿಸುತ್ತೇನೆ. ಅಧಿಕಾರಿಗಳನ್ನು ಚೆನ್ನಾಗಿ ನೋಡಿಕೊಳ್ಳಲಾಗುತ್ತಿದೆ ಮತ್ತು ಆ ಉದ್ದೇಶಕ್ಕಾಗಿ ಹಣದ ಸೌಲಭ್ಯವನ್ನೂ ಒದಗಿಸಬಹುದು. ಅತಿ ಕಡಿಮೆ ಸಂಬಳ ಪಡೆಯುವ ಅಧಿಕಾರಿಗಳ ಬಗ್ಗೆ ನಾನೀಗಾಗಲೆ ನನ್ನ ವೈಯಕ್ತಿಕ ಭಾವನೆಯನ್ನು ವ್ಯಕ್ತಪಡಿಸಿದ್ದೇನೆ.

ಹಿಂದೂ ಸಮುದಾಯವೂ ಬಹಳ ವಿಸ್ತಾರವಾದ ಸಮುದಾಯವಾಗಿದ್ದು, ಹಿಂದುಗಳಲ್ಲಿ ಯಾವುದೇ ವರ್ಗ ಶೇಕಡ 15 ಕ್ಕಿಂತ ಜಾಸ್ತಿ ಇಲ್ಲವಾದ್ದರಿಂದ ಯಾವುದೇ ಒಂದು ವರ್ಗವನ್ನು ಪ್ರಮುಖ ಎಂದು ಪರಿಗಣಿಸಲಾಗುವುದಿಲ್ಲ. ಪ್ರತಿ ವರ್ಗವೂ ಅಲ್ಪಸಂಖ್ಯಾತ ಗುಂಪಿಗೆ ಸೇರಿದ್ದರೂ ಹಲವು ವರ್ಗಗಳನ್ನು, ನಮಗೆ ತಿಳಿದಂತೆ, ನಾವು ಕಡೆಗಾಣಿಸಿದ್ದೇವೆ. ಜನಸಂಖ್ಯೆಯ ಆಧಾರದ ಮೇಲೆ ಹಲವು ವರ್ಗಗಳು ಪ್ರಮುಖವಾಗಿದ್ದರೂ, ಶಿಕ್ಷಣದ ದೃಷ್ಟಿಯಿಂದ ಅವರು ಬಹಳ ಹಿಂದುಳಿದಿದ್ದಾರೆ. ಹಲವು ವರ್ಗಗಳು ಬಹಳ ಚಿಕ್ಕದಾಗಿದ್ದರೂ ಅನುಕೂಲಕರ ಪರಿಸ್ಥಿತಿಗಳ ಪರಿಣಾಮವಾಗಿ ಬಹಳ ಬಲವಂತರಾಗಿದ್ದಾರೆ. ವಾಸ್ತವದಲ್ಲಿ, ಉತ್ತಮ ವಿದ್ಯಾಭ್ಯಾಸದ ಅವಕಾಶಗಳನ್ನು ಹೆಚ್ಚಿಸಲು ನಡೆಯುತ್ತಿರುವ ಚಳುವಳಿಗಳಿಗೆ ಮೂಲ ಕಾರಣ ಯಾವುದಾದರೊಂದು ನಿರ್ದಿಷ್ಟ ಅಲ್ಪಸಂಖ್ಯಾತ ಗುಂಪು ಬಲಶಾಲಿಯಾಗಿದ್ದುದರಿಂದ ತಾವು ಬಹಳ ಮುಂದುವರಿದಿದ್ದೇವೆಂದು ಜನರು ಭಾವಿಸಿದ್ದರಿಂದ ಚಳುವಳಿಗಳು ಆರಂಭವಾದವು. ಆದ್ದರಿಂದ ಅಲ್ಪಸಂಖ್ಯಾತರ ಬಗ್ಗೆ ಆಲೋಚಿಸಬೇಡಿ, ಆದರೂ ಹಲವು ಅಲ್ಪಸಂಖ್ಯಾತರಿಗೆ ಆದ್ಯತೆ ನೀಡಬೇಕಾಗಿದೆ ಏಕೆಂದರೆ ಅವರು ಕೇವಲ ಆರ್ಥಿಕವಾಗಿಯೇ ಅಲ್ಲದೇ, ಶೈಕ್ಷಣಿಕವಾಗಿ ಮತ್ತು ಸಾಮಾಜಿಕವಾಗಿಯೂ ಹಿಂದುಳಿದಿದ್ದಾರೆ. ಇದರ ಸಂಪೂರ್ಣ ಅರಿವು ನನಗಿದೆ.

ಕಾರ್ಯಾಲಯದಲ್ಲಿ ಸಾಮಾನ್ಯ ಜನರನ್ನು ಸರಿಯಾಗಿ ನೋಡಿಕೊಳ್ಳುತ್ತಿಲ್ಲವೆಂದು ಒಬ್ಬ ಸದಸ್ಯರು ಆರೋಪ ಮಾಡಿದ್ದಾರೆ. ಇದನ್ನು ಕೇಳಿ ನನಗೆ ಬಹಳ ನೋವಾಗಿದೆ. ಇದರ ಬಗ್ಗೆ ವಿಚಾರಿಸುತ್ತೇನೆ, ಅದೇ ಸಮಯಕ್ಕೆ ಜನರು ವಿನಾಕಾರಣ ಕಛೇರಿಗಳನ್ನು ಧಾಳಿ ಮಾಡುವುದು ಬೇಡವೆಂದು ನಾನು ಕೇಳಿಕೊಳ್ಳುತ್ತೇನೆ. ನಾನು ಬಳಸಬಾರದಂತಹ ಕಠಿಣ ಪದವನ್ನು ಬಳಸುತ್ತಿದ್ದೇನೆ, ಏಕೆಂದರೆ, ಆ ರೀತಿ ಆಗುತ್ತಿದೆ, ಹಲವು ಕಾರ್ಯಾಲಯಗಳಲ್ಲಿ ನಿಶ್ಚಿತ ಕೆಲಸವಿಲ್ಲದವರನ್ನು ಒಳಗೆ ಬಿಡುವುದಿಲ್ಲವೆಂದು ನನಗನಿಸುತ್ತದೆ. ಕೇಂದ್ರ

---

ವಿಧಾನ ಸಭೆ ನಡವಳಿಕೆ: ದಿ. 12-4-58 ಪುಟ 1609-1617

ಕಾರ್ಯಾಲಯದಲ್ಲಿ ಆವರಿಗೆ ನಿಗದಿತ ಸಮಯವಿದೆ ಮತ್ತು ಗೊತ್ತು ಮಾಡಿದ ವ್ಯಕ್ತಿ ಸಂಬಂಧಿತ ವಿಷಯವನ್ನು ಸ್ವೀಕರಿಸುತ್ತಾರೆ, ನಮ್ಮಲ್ಲಿ ಇಂತಹ ವ್ಯವಸ್ಥೆ ಇಲ್ಲ ಮತ್ತು ಅಂತಹ ವ್ಯವಸ್ಥೆಯನ್ನು ರೂಪಿಸಲು ಹೊರಟರೆ ನಾನು ಖಂಡಿತ ಜನ ವಿರೋಧಿಯಾಗುತ್ತೇನೆ. ನಿಜವಾಗಿ ಹೇಳುವುದಾದರೆ ಮಂತ್ರಿಯನ್ನು ಭೇಟಿ ಮಾಡಲು ಬರುವವರಿಗೆ ಕಾರ್ಯದರ್ಶಿಯನ್ನು ಭೇಟಿಯಾಗುವ ಆವಶ್ಯಕತೆ ಇಲ್ಲ, ನೇರವಾಗಿ ಮಂತ್ರಿಯನ್ನು ಭೇಟಿ ಮಾಡಿ ಹೇಳಬೇಕಾದನ್ನು ಹೇಳಿ, ಕೇಳಬೇಕಾದನ್ನು ಕೇಳಬಹುದು.

ನಾವು ಪ್ರಜಾಪ್ರಭುತ್ವ ದೇಶವನ್ನು ಕಟ್ಟುತ್ತಿದ್ದೇವೆ ಮತ್ತು ಕಟ್ಟುತ್ತೇವೆ. ಯಾವುದೇ ಮಂತ್ರಿ ಬೇಡವೆನಿಸಿದರೆ ಅಥವಾ ಯಾವುದೇ ಅಧಿಕಾರ ಪಕ್ಷ ಶಕ್ತಿಹೀನವೆನಿಸಿದರೆ ಅಥವಾ ಜನಕ್ಕೆ ಈ ವ್ಯವಸ್ಥೆ ನಡೆಯಲಾಗುವುದಿಲ್ಲವೆನಿಸಿದರೆ, ಅವರು ಅದನ್ನು ತೆಗೆದುಹಾಕುತ್ತಾರೆ. ಇಡೀ ದೇಶದ ಸರ್ಕಾರವು ಈ ಮೂಲ ತತ್ವವನ್ನವಲಂಬಿಸಿದೆ.

## ಶಿಕ್ಷಿತ ನಿರುದ್ಯೋಗಿಗಳ ಬಗ್ಗೆ ಚರ್ಚೆ

24ನೇ ಜುಲೈ 1957

ಈಗ ವಿದ್ಯಾವಂತರಾದ ಜನಗಳಿಗೆ ಕೆಲಸ ಸಿಗುವುದಿಲ್ಲ ಎಂದು ಒಂದು ಸ್ಲೋಗನ್ ಎತ್ತಿಕೊಂಡು ಇಲ್ಲಿ ಹೇಳಿದರೆ ಅದನ್ನು ಜನ ನಂಬುತ್ತಾರೆ. ಆ ರೀತಿ ನಂಬುವ ಜನಗಳಿದ್ದಾರೆ. ಏಕೆಂದರೆ ಈಗ ವಿದ್ಯಾವಂತರಲ್ಲದ ನಿರುದ್ಯೋಗಿಗಳ ಸಂಖ್ಯೆಯೇ ಜಾಸ್ತಿಯಾಗಿದೆ. ಸಾಧಾರಣವಾಗಿ ಕಡಿಮೆ ವಿದ್ಯಾವಂತರ ಸಂಖ್ಯೆಯೇ ಜಾಸ್ತಿಯಾಗಿದೆ. ಏನಾದರೂ ಹೇಳಿ ಜನಗಳ ಮತ್ತು ಸರಕಾರದ ಮನಸ್ಸನ್ನು ಕಲಕಿದರೆ ತಮ್ಮ ಕೆಲಸವಾಯಿತು ಎಂದು ಕೆಲವರು ಭಾವಿಸುತ್ತಾರೆ. ಆದರೆ ಸರಕಾರ ಈಗ ಜನಗಳ ಆರ್ಥಿಕಾಭಿವೃದ್ಧಿಯನ್ನು ಹೆಚ್ಚಿಸಲು ಪಂಚವಾರ್ಷಿಕ ಯೋಜನೆ ಮುಂತಾದ ಯೋಜನೆಗಳನ್ನು ಕೈಗೊಂಡಿರುವ ಉದ್ದೇಶವು ಸಹಾ ಅದೇ ಆಗಿದೆ. ವಿದ್ಯಾವಂತರ ಸಂಖ್ಯೆ ಹೆಚ್ಚು ಮಾಡುವುದು ಮತ್ತು ಉದ್ಯೋಗಗಳನ್ನು ಹೆಚ್ಚುಹೆಚ್ಚಾಗಿ ಕಲ್ಪಿಸುವುದೂ ಇದರ ಉದ್ದೇಶವಾಗಿದೆ.

ಪಂಚವಾರ್ಷಿಕ ಯೋಜನೆಯಲ್ಲಿ ಸುಮಾರು ಒಂದು ಕೋಟಿ ಜನರಿಗೆ ಉದ್ಯೋಗ ಕಲ್ಪಸಿಕೊಡಬೇಕೆಂದಿದೆ. ಎಲ್ಲ ಮಟ್ಟಗಳಲ್ಲಿಯೂ ಹಳ್ಳಿಗಳಲ್ಲಿ ಮತ್ತು ಪಟ್ಟಣಗಳಲ್ಲಿ, ನಿರುದ್ಯೋಗ, ಎಲ್ಲಿದ್ದರೂ ಅಲ್ಲಿ ಉದ್ಯೋಗವನ್ನು ದೊರಕಿಸಿಕೊಡಬೇಕೆಂದು ಮಾಡಿದೆ. ಒಂದು ಯೋಜನೆ ಈಗ ಐದು ವರ್ಷ ನಡೆದಿದೆ. ಈ ಪ್ರಶ್ನೆಯನ್ನು ನಾನಾ ದೃಷ್ಟಿಗಳಿಂದ ಬಗೆಹರಿಸಬೇಕೇ ವಿನಾ ಒಂದೇ ರೀತಿಯಲ್ಲಿ ಬಗೆಹರಿಸುವುದಕ್ಕಾಗುವುದಿಲ್ಲ.

ದೇಶದಲ್ಲಿ ನಿರುದ್ಯೋಗ ತಾನೇ ತಾನಾಗಿ ಕುಣಿಯುತ್ತಿದೆ. ಅನೇಕ ಜನರಿಗೆ ಕೆಲಸವಿಲ್ಲ, ಏಕೆಂದರೆ ಅನೇಕ ವ್ಯತ್ಯಾಸಗಳಾಗಿವೆ. ಹೀಗಿರುವಾಗ ಅಂಕಿಅಂಶಗಳನ್ನು ಶೇಖರಿಸಿ ತರಿಸಿದ ಮೇಲೆ ಮುಂದಿನ ಕೆಲಸ ಮಾಡೋಣ ಎಂದು ಕಾದು ನಿಲ್ಲುವುದು ಬುದ್ಧಿವಂತಿಕೆಯ ಕೆಲಸವಲ್ಲ. ನಮ್ಮ ಕರ್ತವ್ಯವನ್ನು ನಾವು ಮಾಡಬೇಕು, ಮೀನ ಮೇಷ ಎಣಿಸುತ್ತಾ ಕುಳಿತುಕೊಳ್ಳಬಾರದು, ಕಾಲ ಕಳೆದು ಹೋಗುತ್ತದೆ. ದ್ವಿತೀಯ ಪಂಚವಾರ್ಷಿಕ ಯೋಜನೆಯಲ್ಲಿ ಸಾಕಷ್ಟು ಮಂದಿಗೆ ಉದ್ಯೋಗಗಳು ದೊರೆಯುತ್ತವೆ.

ಇನ್ನೊಂದು ವಿಚಾರ, ತಂತ್ರಜ್ಞಾನ ಹೇಗೆ ಬೆಳೆಯುತ್ತಿದೆಯೋ ಹಾಗೆಯೇ ಒಂದು ರೀತಿಯಲ್ಲಿ ನಿರುದ್ಯೋಗವು ಬೆಳೆಯುತ್ತಿದೆ. ಹೆಚ್ಚು ಜನರಿಗೆ ಉದ್ಯೋಗ ದೊರಕಲು ಕೈಗಾರಿಕಾ ವಿಕೇಂದ್ರೀಕರಣವಾಗಬೇಕೆಂಬ ದೃಷ್ಟಿಯಿಂದ ಹಳ್ಳಿಗಳಲ್ಲಿ ಸಣ್ಣಸಣ್ಣ ಗ್ರಾಮೋದ್ಯಮಗಳನ್ನು ಹೆಚ್ಚಿಸಬೇಕೆಂದು ಮಾಡಿದ್ದೇವೆ. ಗ್ರಾಮೋದ್ಯೋಗಗಳು ಹೆಚ್ಚಿದರೆ ಹೆಚ್ಚು ಜನರಿಗೆ ಉದ್ಯೋಗ ದೊರಕುತ್ತದೆಂಬ ಉದ್ದೇಶದಿಂದ ಇದಕ್ಕಾಗಿ ಸರ್ಕಾರ ಕೋಟ್ಯಾಂತರ ರೂಪಾಯಿಗಳನ್ನು ಒದಗಿಸಿದೆ. ನಮ್ಮ ದೇಶದಲ್ಲಿ ಜನಸಂಖ್ಯೆ ಜಾಸ್ತಿಯಾಗಿದೆ. ಆದರೆ ಅನೇಕ ಕಾರಣಗಳಿಂದ ಉತ್ಪತ್ತಿ ಕಡಿಮೆಯಾಗಿದೆ. ಇಲ್ಲಿ ಬರಿಯ ವ್ಯವಸಾಯದಿಂದ ಎಲ್ಲರಿಗೂ ಕೆಲಸ ಸಿಕ್ಕುವುದಿಲ್ಲವೆಂಬ ದೃಷ್ಟಿಯಿಂದಲೂ ಕೈಗಾರಿಕಾ ವಿಕೇಂದ್ರೀಕರಣ ಮಾಡುವ ದೃಷ್ಟಿಯಿಂದಲೂ ಗ್ರಾಮ ಕೈಗಾರಿಕೆಗಳನ್ನು ಹೆಚ್ಚಿಸಲು ಪ್ರಯತ್ನ ನಡೆದಿದೆ.

---

ವಿಧಾನ ಸಭೆ ನಡವಳಿಕೆ: ದಿ. 24-7-57 ಪುಟ 1033-1034

ಈಗಿನ ವಿದ್ಯಾಭ್ಯಾಸದ ಕ್ರಮ ಮತ್ತು ರೀತಿನೀತಿ ಸರಿಯಾಗಿಲ್ಲವೆಂದು ಕೆಲವರು ಹೇಳಿದ್ದಾರೆ. ಇದನ್ನು ಒಂದೇ ದಿವಸದಲ್ಲಿ, ಒಂದೇ ಘಂಟೆಯಲ್ಲಿ ಬದಲಾವಣೆ ಮಾಡುವುದಕ್ಕೆ ಸಾಧ್ಯವಿಲ್ಲ. ನಾನಾ ಕಾರಣಗಳಿಂದ ನೂರಾರು ವರ್ಷಗಳಿಂದ ನಮ್ಮ ದೇಶದಲ್ಲಿರುವ ವಿದ್ಯಾಭ್ಯಾಸ ಪದ್ಧತಿಯಿಂದ ಜನರು ಹೆಚ್ಚು ಉದ್ಯೋಗಶೀಲರಾಗುವುದಕ್ಕೆ ಅವಕಾಶವಾಗಿಲ್ಲ, ಇದನ್ನು ಬದಲಾಯಿಸಬೇಕೆಂಬ ಉದ್ದೇಶದಿಂದ ಟೆಕ್ನಿಕಲ್ ಶಿಕ್ಷಣವನ್ನು ಹೆಚ್ಚಿಸಲಾಗುತ್ತಿದೆ. ದೊಡ್ಡ ಕೈಗಾರಿಕೆಗಳಿಗೆ ಅಗತ್ಯವಾದ ಸಣ್ಣಪುಟ್ಟ ವಸ್ತುಗಳನ್ನು ತಯಾರಿಸಲು ನಮ್ಮ ರಾಜ್ಯದಲ್ಲಿ ಹತ್ತು - ಹನ್ನೆರಡು 'ಇಂಡಸ್ಟ್ರಿಯಲ್ ಎಸ್ಟೇಟ್', ಮಾಡಬೇಕೆಂದು ತೀರ್ಮಾನಿಸಿದ್ದೇವೆ. ಬೆಂಗಳೂರು, ಮೈಸೂರು, ದಾವಣಗೆರೆ, ಹರಿಹರ, ಬೆಳಗಾಂ ಮುಂತಾದ ಸ್ಥಳಗಳಲ್ಲಿ ಇವನ್ನು ಸ್ಥಾಪಿಸಲು ಸಾಕಷ್ಟು ಹಣವನ್ನೊದಗಿಸಲಾಗಿದೆ. ಇದರ ಮೂಲಕ ಹೆಚ್ಚು ಜನರಿಗೆ ಉದ್ಯೋಗ ದೊರಕಿಸಿಕೊಡಬೇಕೆಂಬ ಉದ್ದೇಶದಿಂದ ಕೆಲಸ ಮಾಡುತ್ತಿದ್ದೇವೆ.

ಒಟ್ಟಿನಲ್ಲಿ ಎಲ್ಲ ಸಮಸ್ಯೆಗಳಿಗಿಂತಲೂ ನಿರುದ್ಯೋಗ ಸಮಸ್ಯೆ ದೊಡ್ಡದು ಎಂಬುದನ್ನು ಸರ್ಕಾರ ಗಮನಿಸಿ, ಇದನ್ನು ನಿವಾರಣೆ ಮಾಡುವುದಕ್ಕಾಗಿ, ಹಳ್ಳಿಗಳಲ್ಲಿಯೂ ಪಟ್ಟಣಗಳಲ್ಲಿಯೂ ಸಣ್ಣ ಸಣ್ಣ ಊರುಗಳಲ್ಲಿಯೂ ದೊಡ್ಡ ಕೈಗಾರಿಕೆಗಳನ್ನು ಸ್ಥಾಪಿಸಲು ಪ್ರಯತ್ನ ಮಾಡುತ್ತಿದ್ದಾರೆ.

## ಗಡಿವಿವಾದ ಕುರಿತು ಸರ್ಕಾರಿ ನಿರ್ಣಯ

## 26ನೇ ಫೆಬ್ರವರಿ 1966

ಮಹಾರಾಷ್ಟ್ರದ ಹಾಗೂ ಕರ್ನಾಟಕ ಅಥವಾ ಮೈಸೂರಿನ ಸರಹದ್ದಿನ ಪ್ರಶ್ನೆ. ಬಹುಶಃ ಇವತ್ತಿನ ದಿವಸದಿಂದ ಬಂದುದಲ್ಲ. ಈಗ ಪ್ರಶ್ನೆ 40-45 ವರ್ಷಗಳಿಂದ ಇದೆ. ಕಳೆದ 45 ವರ್ಷಗಳಿಂದಲೂ ನಮ್ಮ ಸ್ನೇಹಿತರು ಬೆಳಗಾಂ ಅವರಿಗೆ ಹೋಗಬೇಕು ಎಂದು ಪ್ರಯುತ್ನ ಮಾಡುತ್ತಿದ್ದಾರೆ. ಹಿಂದೆ ಕಾಂಗ್ರೆಸ್ಸಿನಲ್ಲಿ 1919ನೇ ಇಸವಿಯುಲ್ಲಿ ಮಹಾತ್ಮಾಗಾಂಧಿಯವರ ಬುದ್ಧಿವಾದದ ಮೇಲೆ ಪ್ರಜಾಪ್ರಭುತ್ವ ದೃಷ್ಟಿಯಿಂದ ಮತ್ತು ಸಂಸ್ಥೆಯ ಹಿತದೃಷ್ಟಿಯಿಂದ ಭಾಷೆಯ ಆಧಾರದ ಮೇಲೆ ಕಾಂಗ್ರೆಸ್ ಪ್ರದೇಶ ಏರ್ಪಾಡಾಗಬೇಕು ಎಂಬ ಒಂದು ತೀರ್ಮಾನವಾಯಿತು. ಈ ತೀರ್ಮಾನವಾದ ಮೇಲೆ ಕೂಡ ಕೆಲವು ವಿವಾದಾದ್ಮಕ ಪ್ರದೇಶಗಳು ಉಳಿದವು. ಈ ಸಂದರ್ಭದಲ್ಲಿ ಮಹಾರಾಷ್ಟ್ರದ ಆಗಿನ ಏಕೈಕ ಮುಖಂಡರಾಗಿದ್ದ ಶ್ರೀಮಾನ್ ಎನ್.ಸಿ. ಕೇಳ್ಕರ್ ಅವರಿಗೆ ಈ ಪ್ರಶ್ನೆ ಪರಿಶೀಲನೆ ಮಾಡುವುದಕ್ಕೆ ಕಾಂಗ್ರೆಸ್ ಸಂಸ್ಥೆಯು ಒಂದು ಆದೇಶ ನೀಡಿತ್ತು. ಅವರು ಈ ಬಗ್ಗೆ ಸಾಕಷ್ಟು ವಿಚಾರ ಮಾಡಿ ಬೆಳಗಾಂ ಪ್ರದೇಶವು ಕರ್ನಾಟಕ್ಕೆ ಸೇರತಕ್ಕಂಥಾದ್ದು ಎಂದು ತೀರ್ಮಾನ ಮಾಡಿದರು. ಅದು ಆದ ನಂತರ ಪುನಃ ಕೆಲವರು ಸ್ನೇಹಿತರು ಶ್ರೀಮಾನ್ ಕೇಳ್ಕರ್ ಅವರ ಕಡೆಗೆ ಹೋಗಿದ್ದರು. ಆದರೆ ಅವರಿಗೆ ಮನ್ನಣೆ ಸಿಗಲಿಲ್ಲ. ವರ್ಷಕ್ಕೊಂದು ಸಾರಿ ಆಗುವ ಕಾಂಗ್ರೆಸ್ಸಿನ ಅಧಿವೇಶನವು 1924ನೇ ಇಸವಿಯಲ್ಲಿ ಬೆಳಗಾಂನಲ್ಲಿ ಒಂದೇ ಒಂದು ಸಲ ಮಹಾತ್ಮಾ ಗಾಂಧಿಯವರ ಅಧ್ಯಕ್ಷತೆಯಲ್ಲಿ ನಡೆಯಿತು. ಕರ್ನಾಟಕದಲ್ಲಿ ಕಾಂಗ್ರೆಸ್ ಸಮ್ಮೇಳನ ನಡೆಯಬೇಕು ಅದು ಬೆಳಗಾಂನಲ್ಲಿ ನಡೆಯಬೇಕು. ಎಂದು ತೀರ್ಮಾನವಾದಾಗ್ಗೆ ಬೆಳಗಾಂ ಮಹಾರಾಷ್ಟ್ರಕ್ಕೆ ಸೇರಿದ್ದು ಅಲ್ಲಿ ಆಗಬಾರದು ಎಂದು ಕೆಳವರು ಸ್ವಲ್ಪ ತಕರಾರು ಮಾಡಿದರು ಇವರು ತಕರಾರು ಮಾಡಿದರೂ ಕೂಡ ಬೆಳಗಾಂ ಕರ್ನಾಟಕಕ್ಕೆ ಸೇರಿದ್ದು, ಆದುದರಿಂದ ಬೆಳಗಾಂನಲ್ಲಿಯೇ ಕಾಂಗ್ರೆಸ್ ಸಮ್ಮೇಳನ ನಡೆಯತಕ್ಕುದ್ದು ಎಂದು ತೀರ್ಮಾನವಾಯಿತು. ಪುನಃ ಮತ್ತೊಮ್ಮೆ ಬೆಳಗಾಂನಲ್ಲಿ ಮಹಾರಾಷ್ಟ್ರ ಸಮ್ಮೇಳನ ನಡೆಯಬೇಕೆಂದು ಪ್ರಯತ್ನ ನಡೆಯಿತು. ಕರ್ನಾಟಕದಲ್ಲಿ ಇದು ಸಾದ್ಯವಿಲ್ಲವೆಂದು ಸುಮಾರು 1923-24 ರಲ್ಲಿ ಹೇಳಲಾಯಿತು. ಮಹಾರಾಷ್ಟ್ರದವರು ಅಲ್ಲಿ ಸಮ್ಮೇಳನ ಕರೆಯತಕ್ಕಂಥಾದ್ದು ಸರಿಯಲ್ಲ ಎಂದು ಅದಕ್ಕೆ ವಿರೋಧ ವ್ಯಕ್ತಪಡಿಸಿದ್ದೇವೆ. ಆಗ್ಗೆ ಬೆಳಗಾಂನಲ್ಲಿ ಮಹಾರಾಷ್ಟ್ರ ಸಮ್ಮೇಳನ ಕರೆಯುವುದಕ್ಕೆ ಮಹಾರಾಷ್ಟ್ರದ ಮುಖಂಡರು ಅಂದರೆ, ಇದು ನಮ್ಮ ಅನುಕೂಲತೆಯ ದೆಸೆಯಿಂದ ಬೆಳಗಾಂನಲ್ಲಿ ಮಾಡುತ್ತೇವೆ. ಬೆಳಗಾಂ ಮಹಾರಾಷ್ಟ್ರಕ್ಕೆ ಸೇರಿದ್ದು ಅಥವಾ ಸೇರತಕ್ಕಂಥಾದ್ದು ಎಂಬ ಪ್ರಶ್ನೆ ; ಬೆಳಗಾಂ ಕರ್ನಾಟಕಕ್ಕೆ ಸೇರಿದ್ದು ಎಂದು ಒಪ್ಪಿಕೊಂಡಿದ್ದೇವೆ. ಬೆಳಗಾಂ ದೊಡ್ಡ ಪಟ್ಟಣ ಇಗಿರುವುದರಿಂದ ನಾವು ಇಲ್ಲಿ ಸಮ್ಮೇಳನ ನಡೆಸುತ್ತೇವೆ ಎಂದು ಅವರು ಹೇಳಿ ಒಪ್ಪಿಕೊಂಡು ಸಮ್ಮೇಳನ ನಡೆಸಿದ್ದು ಆಯಿತು. ಅನಂತರ ನಮಗೆ ಸ್ವಾತಂತ್ರ್ಯ ಬಂದ ನಂತರ ದಾರ್ ಕಮಿಟಿ ನೇಮಕವಾಗಿ ವಿಚಾರಣೆ

---

ವಿಧಾನ ಸಭೆ ನಡವಳಿಕೆ: ದಿ. 26-2-66

ಮಾಡಲಾಯಿತು. ಫಜಲ್ ಆಲಿ ಸಮಿತಿ ವಿಚಾರಣೆ ನಡೆದು ಬೆಳಗಾಂ ಪಟ್ಟಣ ಇದು ಕರ್ನಾಟಕಕ್ಕೆ ಸೇರಿದ್ದು, ಬೆಳಗಾಂ ಜಿಲ್ಲೆ ಸಹ ಕರ್ನಾಟಕ್ಕೆ ಸೇರತಕ್ಕುದು ಎಂದು ತೀರ್ಮಾನಿಸಿತು. ಇಡೀ ಬೆಳಗಾಂ ಜಿಲ್ಲೆ ಮೈಸೂರಿಗೆ ಸೇರಿದೆ. ಆದರೆ ನಾವೇ ಮುಂದೆ ಬಂದು ಕೆಲವು ಭಾಗ ಅಂದರೆ, ಚಂದಗಡ ತಾಲ್ಲೂಕು ಶೇಕಡ 70 ರಷ್ಟು ಮರಾಠಿ ಮಾತನಾಡುವ ಜನ ಇರುವ ಕಾರಣ ಅದು ನಮಗೆ ಸೇರುವ ಬದಲು ಅದನ್ನು ಮಹಾರಾಷ್ಟ್ರಕ್ಕೆ ಸೇರಿಸಬಹುದು ಎಂದು ಹೇಳಿದ್ದರಿಂದ ಫಸಲ್ ಆಲಿ ಕಮಿಷನ್ ಅವರು ಹಾಗೆ ವರದಿಯಲ್ಲಿ ಬರೆದರು. ಆಂಧ್ರದಲ್ಲಿ ಕೂಡ ಸೇರಬೇಕಾದ ಪ್ರದೇಶದ ಬಗ್ಗೆ ನಾವು ಬರೆದಿದ್ದೇವೆ. ರಾಯಚೂರು ಜಿಲ್ಲೆಯಲ್ಲಿ ಎರಡು ತಾಲ್ಲೂಕು ನಮಗೆ ಬೇಡ ಎಂದು ನಾವು ಬರೆದಿದ್ದೇವೆ. ಕನ್ನಡ ಭಾಷೆ ಮಾತನಾಡತಕ್ಕ ಜನ ಇಲ್ಲದೇ ಇರತಕ್ಕಂಥ ಯಾವ ಪ್ರದೇಶಕ್ಕೂ ನಾವು ಕೈ ಹಾಕಿಲ್ಲ. ಅಲ್ಲದೆ ನಮಗೆ ಸೇರಬೇಕಾದ ಪ್ರದೇಶದ ಬಗ್ಗೆ ಗಾಂಭೀರ್ಯದಿಂದ ಕೇಳಿದ್ದೇವೆ. ನಮ್ಮ ಈ ಗಾಂಭೀರ್ಯ ಇದು ನಮ್ಮ ನಿಶ್ಯಕ್ತಿ ಎಂದು ತಿಳಿದು ಕೊಂಡು ಕೆಲವರು ದುರುಪಯೋಗ ಮಾಡಿಕೊಳ್ಳುತಿದ್ದಾರೆ. ಈಗ ನಾವಾದರೂ ಅಷ್ಟೇ ಗಾಂಭೀರ್ಯದಿಂದ ಹೇಳುತ್ತೇವೆ. ಯಾವುದೇ ದೃಷ್ಟಿಯಿಂದ ಬೆಳಗಾಂ ಮಹಾರಾಷ್ಟ್ರಕ್ಕೆ ಸೇರುವುದಕ್ಕೆ ಸಾಧ್ಯವಿಲ್ಲ. ಜನಸಂಖ್ಯೆಯ ಆಧಾರದ ಮೇಲೆ ಸಹ ನೋಡಿದರೂ ಮಹಾರಾಷ್ಟ್ರದವರು ಶೇಕಡ 50ಕ್ಕಿಂತ ಕಡಿಮೆ ಇದ್ದಾರೆ. ಅದು ಕನ್ನಡ ಪ್ರದೇಶ. ಅದು ನಮಗೆ ಸೇರಿದ್ದು. ಬೆಂಗಳೂರು ನಗರದಲ್ಲಿ ಕೂಡ ತಮಿಳು, ತೆಲುಗು ಮತ್ತು ಬೇರೆ ಭಾಷೆ ಮಾತನಾಡುವ ಜನ ಹೆಚ್ಚಿದ್ದರೂ ಕೂಡ ಅದು ಬೇರೆಯಾಗಲಾರದು. ಆದುದರಿಂದ ಅವರು ಹೇಳುವುದು ಅರ್ಥವಿಲ್ಲದ ಒಪ್ಪಲಾರದ ಮಾತು. ಯಾವುದೇ ವ್ಯಾವಹಾರಿಕ ದೃಷ್ಟಿಯಿಂದ ಅವರು ಹೇಳುವುದು ಆಗದ ಮಾತು ಆಗಿರುವುದರಿಂದ, ಅವರು ಇಂಥ ಹವ್ಯಾಸ ಬಿಟ್ಟುಬಿಡುವುದು ಒಳ್ಳೆಯದು ಎಂದು ನನಗೆ ಕಾಣುತ್ತದೆ. ಮಾನ್ಯ ಸದಸ್ಯರು ತಮ್ಮ ನಿರ್ಣಯದಲ್ಲಿ ಹೇಳಿರುವ ರೀತಿಯಲ್ಲಿ ನೋಡಿದರೆ ಸುಮಾರು 130 ಮೈಲಿ ಪ್ರದೇಶ ಕೇಳುತ್ತಿದ್ದಾರೆ. ಬೀದರ್ ಜಿಲ್ಲೆಯ ವಿಚಾರದಲ್ಲಿ ನಾನು ಅನೇಕ ಸಲ ಹೇಳಿದ್ದೇನೆ. ಮೊದಲು ಬೀದರ್ ಜಿಲ್ಲೆಯು ಹೈದರಾಬಾದ್ ಸಂಸ್ಥಾನಕ್ಕೆ ಸೇರಿತ್ತು. ಆಗ್ಗೆ ಮೂರು ಭಾಷೆಯ ಪ್ರತಿನಿಧಿಗಳು, ಅಂದರೆ, ಹೈದರಾಬಾದಿನಲ್ಲಿರತಕ್ಕ ಮರಾಠವಾಡ, ತೆಲಂಗಾಣ ಮತ್ತು ಕರ್ನಾಟಕ ಈ ಮೂರು ಪ್ರದೇಶದ ಚುನಾಯಿತ ಸದಸ್ಯರು ಸೇರಿ ಒಂದು ತೀರ್ಮಾನ ಮಾಡಿದರು. ಇಂತಿಂತ ಭಾಗ ಇಂಥಿಂಥ ಪ್ರದೇಶಕ್ಕೆ ಬರಬೇಕು ಎಂದು. ಬೀದರ್ ಜಿಲ್ಲೆಯ ವಿಚಾರದಲ್ಲಿ ಒಂದು ತೀರ್ಮಾನವಾಗಿದ್ದು. ಅದನ್ನು ಎಲ್ಲರೂ ಒಪ್ಪಿಕೊಂಡಿದ್ದಾರೆ. ಈ ವಿಷಯ ಪಾರ್ಲಿಮೆಂಟಿನ ಮುಂದೆ ಬಂದಾಗ್ಗೆ ಸಹ ಯಾವ ಭಾಗದಲ್ಲಿ ಒಂದು ಭಾಷೆಯ ಮಾತನಾಡುವ ಜನ ಹೆಚ್ಚಾಗಿ ಇದ್ದಾರೆ, ಯಾವುದು ಆಂಧ್ರಕ್ಕೆ ಸೇರಬೇಕು ಯಾವುದು ಕರ್ನಾಟಕಕ್ಕೆ ಸೇರಬೇಕು ಎಂಬುದನ್ನು ಪುನಃ ಆಲೋಚನೆ ಮಾಡಿ ತೀರ್ಮಾನ ಮಾಡಿದ್ದಾರೆ. ಯಾವುದು ಆಂಧ್ರಕ್ಕೆ ಸೇರಬೇಕು ಎಂದು ಹೇಳಿದ್ದರೋ ಅದನ್ನು ಬಿಟ್ಟುಕೊಟ್ಟಿದ್ದೇವೆ ನ್ಯಾಯವಾಗಿರುವುದನ್ನು ಅವರು ಮಾಡಿದ್ದಾರೆ ಇದರ ಬಗ್ಗೆ ತೀರ್ಮಾನವಾಗಿದೆ. ಹೈದರಾಬಾದ್ ವಿಧಾನ ಸಭೆಯಲ್ಲಿ ಕೂಡ

ತೀರ್ಮಾನವಾಗಿದ್ದು. ಬೀದರ್ ಜಿಲ್ಲೆಯ ಬಗ್ಗೆ ತೀರ್ಮಾನವಾಗಿದೆ.

ಇನ್ನು, ಕಾರವಾರ ಜಿಲ್ಲೆಯಲ್ಲಿ ಕೊಂಕಣಿ ಮಾತನಾಡುವವರು ಇದ್ದಾರೆ. ಕೊಂಕಣಿ ಭಾಷೆ ನಮ್ಮದು, ಆ ಪ್ರದೇಶ ನಮಗೆ ಬರಬೆಕು ಎಂದು ಒಂದು ಅವರ ವಾದ ವಿದೆ. ಆದರೆ ಕೊಂಕಣಿಗೂ ಮರಾಠಿಗೂ ಏನೂ ಸಂಬಂಧವಿಲ್ಲ. ಮರಾಠಿ ಭಾಷೆ ಬರುವ ಮೊದಲೇ ಕೊಂಕಣಿ ಭಾಷೆ ಅಸ್ತಿತ್ವದಲ್ಲಿತ್ತು. ಅವರ ಅಭಿಪ್ರಾಯವು ಏನೇ ಇರಲಿ. ಕೊಂಕಣಿ ಮಾತನಾಡುವವರು ಎಲ್ಲರೂ ಮಹಾರಾಷ್ಟ್ರಕ್ಕೆ ಸೇರಬೇಕು ಅಂದರೆ ಬಹು ಭಾಗ ಅವರಿಗೆ ಹೊರಟು ಹೋಗಬೇಕಾಗುತ್ತದೆ. ಕೊಂಕಣಿ ಮಾತನಾಡುವವರು ಬಹಳ ಜನ ಮೈಸೂರು ರಾಜ್ಯದಲ್ಲಿ ಇದ್ದಾರೆ. ಕೊಂಕಣಿ ಮಾತನಾಡತಕ್ಕಂಥವರು ಸುಮಾರು 13 ಲಕ್ಷ ಜನ ಇದ್ದಾರೆ. ಅವರಲ್ಲಿ ಒಂದು ಒಂದೂವರೆ ಲಕ್ಷ ಜನ ಕೊಂಕಣಿ ಮಾತನಾಡುವವರು ಬೊಂಬಾಯಿಯಲ್ಲಿ ಇದ್ದಾರೆ. ಬೊಂಬಾಯಿಯಲ್ಲಿರತಕ್ಕಂಥ ಕೊಂಕಣಿ ಮಾತನಾಡುವವರು ಅಲ್ಲಿಯವರು ಅಲ್ಲ. ಗೋವಾದಿಂದ ಅಲ್ಲಿಗೆ ಹೋಗಿದ್ದಾರೆ. ಅಂಥವರು 1,10,000 ಜನ ಇದ್ದಾರೆ. ಉತ್ತರ ಮತ್ತು ದಕ್ಷಿಣ ಕನ್ನಡ ಜಿಲ್ಲೆಯವರು 30-40 ಸಾವಿರ ಜನ ಇದ್ದಾರೆ. ಈ ಜನಗಳು ಯಾವುದಕ್ಕೆ ಓಟು ಮಾಡಬೇಕು ಎಂಬುದು ತೀರ್ಮಾನವಾಗಿಲ್ಲ. ಅಲ್ಲಿಗೆ ಹೋಗಿರತಕ್ಕಂಥ ಕೊಂಕಣಿ ಮಾತನಾಡತಕ್ಕ ಜನ ಹೆಚ್ಚು ಕಡಿಮೆ ದಕ್ಷಿಣ ಕನ್ನಡ ಜಿಲ್ಲೆಯಿಂದ 300 ಮೈಲಿ ದೂರ ಇದ್ದಾರೆ. ಇನ್ನು ಉಳಿದ ಜನ ಲೆಕ್ಕ ಹಾಕಿದರೆ ಸುಮಾರು 6 ಲಕ್ಷ ಜನ ಮೈಸೂರು ರಾಜ್ಯದಲ್ಲಿ ಇದ್ದಾರೆ. ಕೊಂಕಣಿ ಮಾತನಾಡುವವರು ಉತ್ತರ ಕನ್ನಡ ಜಿಲ್ಲೆಯಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ. ನಮ್ಮ ಜಿಲ್ಲೆಯಲ್ಲಿ ಇದ್ದಾರೆ, ಶಿವಮೊಗ್ಗಾ ಜಿಲ್ಲೆಯಲ್ಲಿ ಇದ್ದಾರೆ. ಕರ್ನಾಟಕದಲ್ಲಿ ಅಂದರೆ ಮೈಸೂರು ರಾಜ್ಯದಲ್ಲಿ ಹೆಚ್ಚು ಜನ ಕೊಂಕಣಿ ಮಾತನಾಡತಕ್ಕಂಥವರು ಇದ್ದಾರೆ, ಕೇರಳ ರಾಜ್ಯದಲ್ಲಿ 50 ಸಾವಿರ ಗೋವಾದಲ್ಲಿ ಕೂಡ ಐದೂವರೆ ಆರು ಲಕ್ಷ ಜನ ಇದ್ದಾರೆ. ಇದೊಂದು ಪ್ರಶ್ನೆ ಇದೆ.

ಇವತ್ತು ಇಲ್ಲಿ ಅದನ್ನು ಹೇಳುವುದು ಅಪ್ರಸ್ತುತ. ಹಿಂದೆಯೇ ಅಂಕಿ ಅಂಶ ತೋರಿಸಿ ಹೇಳಿದ್ದೇನೆ. ಮಹಾರಾಷ್ಟ್ರದಲ್ಲಿ ಬೊಂಬಾಯಿಯನ್ನು ಬಿಟ್ಟರೆ ಉಳಿದ ಕಡೆಗಳಲ್ಲಿ ಕೊಂಕಣಿ ಮಾತನಾಡುವವರ ಸಂಖ್ಯೆ ಕಡಮೆ. ಮೈಸೂರಿನಲ್ಲಿ ಪ್ರತಿ ಜಿಲ್ಲೆಯಲ್ಲೂ ಒಂದೂವರೆ-ಎರಡು ಲಕ್ಷ ಜನರಿದ್ದಾರೆ, ಗೋವಾ ಪಕ್ಕದಲ್ಲೂ ಇದ್ದಾರೆ. ಕೊಂಕಣಿ ಮತ್ತು ಮರಾಠಿಗೂ ಸಂಬಂಧವೇ ಇಲ್ಲ ಎಂದು ನಿಪುಣರೇ ಹೇಳಿದ್ದಾರೆ. ಅದನ್ನು ತೀರ್ಮಾನ ಮಾಡುವುದಕ್ಕೆ ನಾನು ಹೋಗುವುದಿಲ್ಲ. ಕೊಂಕಣಿ ಮತ್ತು ಮರಾಠಿಗೆ ಯಾವುದೇ ಸಂಬಂಧವಿದೆ ಎಂದು ನಾನು ಒಪ್ಪುವುದಿಲ್ಲ. ಉತ್ತರ ಕನ್ನಡ ಜಿಲ್ಲೆಯಲ್ಲಿ ಒಂದೇ ಒಂದು ಊರಿನಲ್ಲಿ ಮರಾಠಿ ಮಾತನಾಡುವವರ ಬಹುಸಂಖ್ಯೆ ಇದೆ, ಅಲ್ಲಿ ಲೈಟ್ ಹೌಸ್ ಕಾಯುವವರ 8 ಮನೆಗಳಿವೆ, ಅದರಲ್ಲಿ 6 ಮನೆಗಳವರು ಮರಾಠಿ ಮಾತನಾಡುತ್ತಾರೆ. ಇನ್ನು ಯಾವ ತಾಲ್ಲೂಕಿನಲ್ಲೂ ಕೂಡ ಬಹಳ ಜನ ಮರಾಠಿ ಮಾತನಾಡುವವರಿಲ್ಲ. ಕಾರವಾರದಲ್ಲಿರುವವರೆಲ್ಲರಿಗೂ ಕನ್ನಡ ತಿಳಿಯುತ್ತದೆ. ಕೊಂಕಣಿ ಮತ್ತು ಮರಾಠಿಗೂ ಸಂಬಂಧವಿದೆ, ಅದ್ದರಿಂದ ನಮಗೆ ಬಿಡಿ ಎಂದು ಹೇಳುವುದರಲ್ಲಿ ಅರ್ಥವಿಲ್ಲ. ಇದನ್ನು

ಜವಾಬ್ದಾರಿಯಿಂದ ವಿಚಾರ ಮಾಡಬೇಕಾಗಿದೆ. ಇಲ್ಲಿ ಅವನು ಭಾವೋದ್ರೇತದಿಂದ ಮಾತನಾಡಿದ್ದಾರೆ. ಯಾವಾಗಲೂ ಸತ್ಯಾಂಶ ನೋಡಿ ಮಾತನಾಡಬೇಕು, ಸುಮ್ಮನೆ ಗಲಾಟೆ ಮಾಡಿದರೆ ಬದಲಾವಣೆಯಾಗುವುದಿಲ್ಲ. ಸಾಕಷ್ಟು ಇದನ್ನೆಲ್ಲಾ ಆಲೋಚನೆ ಮಾಡುತ್ತಿದ್ದೇವೆ. ನಾವೆಲ್ಲರೂ ಒಂದು ದೇಶದವರೆಂಬುದನ್ನು ಒಪ್ಪಬೇಕು. ಆದುದರಿಂದ ನಮಗೇ ಬರಬೇಕೆಂದು ಯಾರೂ ಹಟ ಮಾಡಬಾರದು. ಈ ಪ್ರಶ್ನೆ ಬಿಡಿಸಬೇಕಾದರೆ ಕೆಲವು ಮೂಲಭೂತ ಆಧಾರಗಳಿವೆ. ಭೌಗೋಳಿಕ ದೃಷ್ಟಿಯಿಂದ, ಸಂಪನ್ಮೂಲ ದೃಷ್ಟಿಯಿಂದ, ಆಡಳಿತ ದೃಷ್ಟಿಯಿಂದ ಯಾವುದು ಹೇಗೆ ಮಾಡಿದರೆ ಅನುಕೂಲ ಎಂದು ಎಲ್ಲವನ್ನೂ ವಿಚಾರಮಾಡಿ ನೋಡಿ, ಸಾಕಷ್ಟು ಪರಿಶೀಲನೆಮಾಡಿ ಈಗ ಒಂದು ತೀರ್ಮಾನಕ್ಕೆ ಬಂದಿದ್ದೇವೆ. ಉತ್ತರ ಕನ್ನಡ ಜಿಲ್ಲೆಯ ಯಾವ ಭಾಗವೂ ಕೂಡ ಮಹಾರಾಷ್ಟ್ರಕ್ಕೆ ಸೇರತಕ್ಕದ್ದಲ್ಲ. ಬೆಳಗಾಂ ಜಿಲ್ಲೆಯಲ್ಲಿ ಕೆಲವು ವ್ಯತ್ಯಾಸ ಮಾಡಿಕೊಳ್ಳಬಹುದು. ಈಗಿರುವ ವ್ಯವಸ್ಥೆ ನಾವು ಮಾಡಿದ್ದಲ್ಲ, ಸಂಬಂಧಪಟ್ಟವರು ಎಂಟು ವರ್ಷಗಳ ಕೆಳಗೆ ಮಾಡಿದ್ದು. ಕಾರವಾರದಲ್ಲಿ ಅವರಿಗೆ ಯಾವ ಅಧಿಕಾರವೂ ಇಲ್ಲ. ಆದರೆ ಬೆಳಗಾಂ ಜಿಲ್ಲೆಯಲ್ಲಿ ಸೋಲಾಪುರ ಪ್ರದೇಶವೇನಿದೆ ಅಲ್ಲಿ ಕೆಲವು ಮರಾಠಿ ಮಾತನಾಡುವ ಜನ ಹೆಚ್ಚಾಗಿದ್ದಾರೆ, ಪಕ್ಕದ ಜಿಲ್ಲೆಗಳಲ್ಲಿ ಕನ್ನಡ ಮಾತನಾಡುವವರೇ ಹೆಚ್ಚಾಗಿದ್ದಾರೆ ಆದುದರಿಂದ ಈ ಎರಡು ಜಿಲ್ಲೆಗಳಲ್ಲಿ ಶೇಕಡ 70 ಜನರಿರಬೇಕು, ಇದ್ದರೆ ಬದಲಾವಣೆ ಮಾಡಿ ಎಂದು ಹೇಳಿದೆ, ಈಗಲೂ ವಾಸ್ತವಾಂಶ ನೋಡಿ ಕಡಿಮೆ ಮಾಡಲು ನಾನು ಸಿದ್ಧವಾಗಿದ್ದೇನೆ. ಜನಸಂಖ್ಯೆ ಹೆಚ್ಚಾಗಿದ್ದರೆ ಭೌಗೋಳಿಕ ದೃಷ್ಟಿಯಿಂದ ಇದನ್ನು ಮಾಡಬಹುದು. ಹಾಗೆ ಮಾಡುವಾಗ ವ್ಯವಹಾರ, ಉದ್ಯೋಗ, ವ್ಯಾಪಾರ ಈ ಎಲ್ಲಾ ದೃಷ್ಟಿಗಳಿಂದಲೂ ಪರಿಶೀಲಿಸಬೇಕು. ಬೆಳಗಾಂ ಪಟ್ಟಣವು ಸುಮಾರು ನೂರು ವರ್ಷಗಳಿಂದ ನಾಲ್ಕು ಜಿಲ್ಲೆಗಳಿಗೆ ಕೇಂದ್ರಸ್ಥಾನವಾಗಿದೆ. ಉತ್ತರ ಕರ್ನಾಟಕದಲ್ಲಿ ಬೊಂಬಾಯಿನ ಭಾಗಗಳು ಯಾವುವು ಬಂದಿವೆ ಅವನ್ನು ಯಾವುದೇ ದೃಷ್ಟಿಯಿಂದ ಬದಲಾಯಿಸುವುದು ಸಾಧ್ಯವಿಲ್ಲ. ಹಾಗೆ ಮಾಡುವುದಕ್ಕೆ ಕಾರಣವಿಲ್ಲ. ಯಾವ ದೃಷ್ಟಿಯಿಂದ ಯೋಚನೆ ಮಾಡಿದರೂ ಸರಿಹೋಗುವುದಿಲ್ಲ.

ಸೊಲ್ಲಾಪುರ ಮತ್ತು ಬೆಳಗಾಂ ಜಿಲ್ಲೆಗಳಲ್ಲಿ ಕೆಲವು ತಾಲ್ಲೂಕುಗಳನ್ನು ಈ ಕಡೆ ಆ ಕಡೆ ಬದಲಾಯಿಸುವುದಕ್ಕೆ ಈಗಲೂ ಸಿದ್ಧ. ಮೈಸೂರು ಸರಕಾರ ಸಾಕಷ್ಟು ಆಲೋಚನೆ ಮಾಡಿ ಸಣ್ಣಪುಟ್ಟ ಹೊಂದಾಣಿಕೆ ಮಾಡಿಕೊಳ್ಳಬಹುದು ಎಂದು ಮೈಸೂರು ಸರಕಾರ ಸ್ಪಷ್ಟ ಪಡಿಸಿದೆ, ಈ ವಿಚಾರದಲ್ಲಿ ಹಿಂದೆ ಪತ್ರ ವ್ಯವಹಾರ ಕೂಡ ನಡೆದಿದೆ. ಇದೆಲ್ಲವನ್ನೂ ಆಲೋಚಿಸಿ ಸೊಲ್ಲಾಪುರ ಮತ್ತು ಬೆಳಗಾಂ ಜಿಲ್ಲೆಗಳಿಗೆ ಸಂಬಂಧಪಟ್ಟ ಹಾಗೆ ಸಣ್ಣಪುಟ್ಟ ಹೊಂದಾಣಿಕೆ ಮಾಡಲು ಸಾಧ್ಯವಾಗಬಹುದು. ನಿಪ್ಪಾಣಿ ಸಣ್ಣ ಊರಾದರೂ ಕೂಡ ಅದು ದೊಡ್ಡ ವ್ಯಾಪಾರ ಸ್ಥಳ. ವ್ಯಾಪಾರಕ್ಕೆ ತೊಂದರೆ ಮಾಡುವುದು ಸರಿಯಲ್ಲ. ಆ ಒಂದು ದೃಷ್ಟಿಯಿಂದ ನಿಪ್ಪಾಣಿ ಮತ್ತು ಬೆಳಗಾಮನ್ನು ಬಿಡಿ. ಕಾರವಾರ ತಾಲ್ಲೂಕಿನಲ್ಲಿ ಯಾವುದೂ ಕೇಳಬಾರದು, ಉಳಿದಿರುವುದನ್ನು ನೋಡಿ ಸರಿಪಡಿಸಿಕೊಳ್ಳಬಹುದು. ಆದರೆ ಒಂದು ವಿಚಾರ, ಇವತ್ತು ವಿಶೇಷ ಪರಿಸ್ಥಿತಿ ಇದೆ, ಅದಿರುವಾಗ ಈ ಕೆಲಸಕ್ಕೆ ಕೈಹಾಕುವುದು

ಸರಿಯೇ? ಸರಿಯಲ್ಲ ಎಂದು ನನಗೆ ತೋರುತ್ತದೆ. ಈ ಪ್ರಶ್ನೆಯನ್ನು ಈಗ ತೆಗೆದುಕೊಂಡರೆ ಅನೇಕ ರೀತಿಯಲ್ಲಿ ತೊಂದರೆಯಾಗುತ್ತದೆ. ಈಗಿರುವುದು ಬರೀ ಕರ್ಣಾಟಕ ಮತ್ತು ಮಹಾರಾಷ್ಟ್ರಗಳ ಪ್ರಶ್ನೆಯಲ್ಲ, ಬಂಗಾಳ, ಆಂಧ್ರ, ಒರಿಸ್ಸಾ ಮುಂತಾದುವುಗಳ ವಿಚಾರವೂ ಇದೆ, ಮದ್ರಾಸಿನ ಕೇರಳದ ಕೆಲವು ಭಾಗ ನಮಗೆ ಬರಬೇಕೆಂದು ಈಗಲೂ ಹೇಳುತ್ತಿದ್ದೇವೆ. ನ್ಯಾಯವೆಂದು ಒಪ್ಪಿರುವ ಸಂದರ್ಭಗಳು ಇದೆ. ಆದರೆ ಅದಕ್ಕೆಲ್ಲ ಇದು ಸಮಯವಲ್ಲ. ನ್ಯಾಯವಾಗಿ ಅಲ್ಪಸಂಖ್ಯಾತರಿಗೆ ಏನು ಅನುಕೂಲ ಬೇಕೋ ಅದನ್ನು ಕಲ್ಪಿಸಬೇಕಾದ್ದು ನಮ್ಮ ಕರ್ತವ್ಯ ಮತ್ತು ಕೇರಳ ಮತ್ತು ಮದ್ರಾಸು ಸರಕಾರಗಳ ಕರ್ತವ್ಯ ಸಹ ಆಗಿದೆ. ಹೀಗೆ ನಾಲ್ಕು ಕಡೆ ನಮ್ಮ ಪ್ರಶ್ನೆ ಇದೆ. ನಮ್ಮ ದುರಾದೃಷ್ಟಕ್ಕೆ ಟಿಪ್ಪೂ ನಂತರ ಸುಮಾರು ಅರ್ಧ ಭಾಗ ನಮ್ಮ ಪ್ರದೇಶ ಹೋಯಿತು. ಕೆಲವರು ಸರಿಯಾದ ವಿಚಾರ ತಿಳಿಯದೆ ತಮಗೆ ತೋಚಿದಂತೆ ಯೋಚನೆ ಮಾಡುತ್ತಿದ್ದಾರೆ. ಅವರು ಬೇರೆ ರಾಜ್ಯಗಳಿಗೆ ಸೇರಬೇಕಾದ ಭಾಗಗಳು ನಮಗೆ ಸೇರಿವೆಯೆಂಬ ಭಾವನೆ ಬೆಳೆಸಿಕೊಂಡಿದ್ದಾರೆ, ಅದು ಸರಿಯಲ್ಲ. ನಾವು ಕಳೆದುಕೊಂಡಿರುವುದೇ ಜಾಸ್ತಿ. ಮೊದಲು ಭದ್ರವಾದ ಸರಕಾರವಿರಲಿಲ್ಲ, ನಾನಾ ಕಡೆ ಆನೇಕ ಭಾಗಗಳು ಹರಿದು ಹಂಚಿಹೋಗಿದ್ದವು. ಕೆಲವರ ಪ್ರಭಾವಕ್ಕೊಳಗಾಗಿ ನಮ್ಮ ಭಾಗಗಳು ಬೇರೆ ರಾಜ್ಯಗಳಿಗೆ ಸೇರಿಹೋಗಿವೆ. ಹೀಗಾಗಿ ಅನೇಕ ಭಾಗಗಳನ್ನು ಕಳೆದುಕೊಂಡಿದ್ದೇವೆ. ಇದಕ್ಕಾಗಿ ಚಳುವಳಿ ಮಾಡುತ್ತಿದ್ದೇವೆ. ಜನಸಾಮಾನ್ಯರಲ್ಲಿ ಈಗ ಆ ಭಾಗಗಳೆಲ್ಲವೂ ಮೈಸೂರಿಗೆ ಸೇರಬೇಕೆಂಬ ಭಾವನೆ ಇದೆ, ಅವರಲ್ಲಿ ಗಲಾಟೆ ಇಲ್ಲದಿದ್ದರೂ ನಿರ್ಣಯ ಮತ್ತು ಅವರ ಹಿಂಬಾಲಕರು ತಮಗೆ ಬೇಕಾದ ಉಪಯೋಗ ಮಾಡಿಕೊಳ್ಳಲು ಗಲಾಟೆ ಮಾಡುತ್ತಿದ್ದಾರೆ, ಬಹುಶಃ ಆ ರೀತಿ ಮಾಡುವುದು ಅವರ ಸ್ವಭಾವ ಎಂದು ಕಾಣುತ್ತದೆ. ಅವರ ಅಳಿವು ಉಳಿವಿನ ಪ್ರಶ್ನೆ ಇರುವುದರಿಂದ ಆ ರೀತಿ ಮಾಡುವುದು ಸರಿಯೇ ಇರಬಹುದು. ನಾವು ಬೇಡವೆಂದು ಹೇಳಿದರೂ ಅವರು ಬಿಡುವುದಿಲ್ಲ. ಹಾಗೆ ಮಾಡಬೇಡಿ ಎಂದು ಹೇಳುವುದಕ್ಕೆ ನಮಗೆ ಅಧಿಕಾರವಿಲ್ಲ. ಪ್ರಜಾಭಿಪ್ರಾಯ ಮತ ಕೇಳುವುದು ಮೂರ್ಖತನ. ಎಲ್ಲಾ ಪ್ರದೇಶಗಳೂ ನಮಗೆ ಬೇಕು ಎಂದು ಹೇಳುವುದು ಸರಿಯಲ್ಲ.

ಯಾರು ಗಲಾಟೆ ಮಾಡುತ್ತಿದ್ದಾರೆಂದು ನಮಗೆ ಗೊತ್ತಿದೆ. ಪೊಲೀಸರಿಂದ ಅನೇಕ ವರದಿ ಸಹ ಬಂದಿವೆ. ಕೇರಳದಿಂದಲೂ ಸಹ ನಮಗೆ ಕೆಲವು ಭಾಗಗಳು ಬರಬೇಕಾಗಿದೆ. ಅದನ್ನು ಕೇಳುವುದಕ್ಕೆ ಇದು ಸರಿಯಾದ ಕಾಲವಲ್ಲ. ರಾಜಕೀಯ ದೃಷ್ಟಿಯಿಂದಲೂ ಒಟ್ಟು ಭಾರತದ ದೃಷ್ಟಿಯಿಂದಲ್ಲೂ ಸರಿಯಲ್ಲ. ಬೇಕಾದರೆ ಸ್ನೇಹಿತರಂತೆ ಒಂದು ಕಡೆ ಸೇರಿ ಈ ವಿಚಾರದಲ್ಲಿ ಸಣ್ಣ ಪುಟ್ಟ ಬದಲಾವಣೆಗಳನ್ನು ಮಾಡಿಕೊಳ್ಳಲು ಮೈಸೂರು ಸರ್ಕಾರ ಸಿದ್ದವಿದೆ. ಈ ಪ್ರಶ್ನೆಯ ಬಗ್ಗೆ ನಾವೂ ಸಹಾ ಬೇಕಾದಷ್ಟು ಯೋಚನೆ ಮಾಡಿದ್ದೇವೆ. ಸುಮ್ಮನೆ ಆಪಾದನೆಗಳನ್ನು ಮಾಡುವುದು ಬೇಡ, ಇವತ್ತು ಶ್ರೀಮಾನ್ ಪಾಟೀಲರು ತಂದಿರತಕ್ಕ ಪ್ರಶ್ನೆಯನ್ನು ಒಪ್ಪಿಕೊಳ್ಳ ಆಗುವುದಿಲ್ಲ. ಅವರು ಒಳ್ಳೆಯ ಲಾಯರು. ಇದರಲ್ಲಿಯೂ ಸಹ ಲಾಯರಾಗಿದ್ದು ಚೆನ್ನಾಗಿ ವಾದವೂ ಮಾಡುತ್ತಾರೆ ಸಂದಾದನೆಯೂ ಮಾಡುತ್ತಾರೆ.

ಇದರಲ್ಲಿಯೂ ಸಹ ಲಾಯರ್ ಬುದ್ದಿವಂತಿಕೆ ತೋರಿಸಿದ್ದಾರೆಯೇೞೇರಿಸಿದ್ದಾರೆಯೇ ವಿನಾ, ವಸ್ತುತಃ ಆಡಿದ ಮಾತಲ್ಲ. ಇದು ರಾಷ್ಟ್ರೀಯ ಬುದ್ದಿವಂತಿಕೆ ಹೇಗೆ ಆಗುತ್ತದೆ? ಈ ಪ್ರಶ್ನೆ ಬಿಟ್ಟುಬಿಟ್ಟರೆ ನಾನೂ ಉಳಿಯುವುದಿಲ್ಲವೆಂದು ಏನು ಇದೆ ಅದು ಈ ನಿರ್ಣಯಕ್ಕೆ ಯಾವ ಬೆಂಬಲವೂ ಸಿಗಲು ವಾಸ್ತವಲ್ಲ ವಾದದಿಂದ ಸಾಧ್ಯವಿಲ್ಲ. ಈ ನಿರ್ಣಯವನ್ನು ತಂದಿರತಕ್ಕ ಶ್ರೀಮಾನ್ ಪಾಟೀಲರು ಇಷ್ಟಪಟ್ಟರೆ ನಿರ್ಣಯವನ್ನು ಒತ್ತಾಯ ಮಾಡಬಹುದು. ಆದರೆ ತಿರಸ್ಕಾರ ಮಾಡತಕ್ಕದ್ದು ನಮ್ಮೆಲ್ಲರ ಕರ್ತವ್ಯವೆಂದು ಅರಿಕೆ ಮಾಡಿಕೊಳ್ಳುತ್ತೇನೆ.

## ಸಚಿವರ ಆಸ್ತಿ ಸಂಪತ್ತುಗಳನ್ನು
## ನಿಗದಿ ಮಾಡಲು ಆಯೋಗದ ಸ್ಥಾಪನೆ ಮೇಲಿನ ಚರ್ಚೆ

**26ನೇ ಫೆಬ್ರವರಿ 1966**

ಮುಖ್ಯವಾಗಿ ಮಂತ್ರಿಗಳು, ಶಾಸಕರುಗಳು, ಇವರ ವಿಚಾರದಲ್ಲಿ ಒಂದು ಕಮೀಷನ್ ನೇಮಕ ಮಾಡಬೇಕೆಂದು ಒಂದು ನಿರ್ಣಯ ತಂದಿದ್ದಾರೆ. ಇದು ಕಾರ್ಯತಃ ಸಾಧ್ಯವಾಗದ ಮಾತು. ಕಮೀಷನ್ ನೇಮಕ ಮಾಡುವುದಕ್ಕಾಗುವುದಿಲ್ಲ. ಸಮುದ್ರಕ್ಕಿಂತಲೂ ಆಳವಾದ ವಿಚಾರವನ್ನು ಮಾಡಬೇಕು ಎಂದು ಹೇಳಿದ್ದಾರೆ. ಒಂದು ವರ್ಷವಲ್ಲ, ಎರಡು ವರ್ಷವಲ್ಲ, 1947 ನೇ ವರ್ಷದಿಂದ ಅಂದರೆ ಸುಮಾರು 20 ವರ್ಷವಾಗುತ್ತಾ ಬಂತು. 20 ವರ್ಷದಲ್ಲಿ ಎಷ್ಟು ಜನ ಶಾಸಕರುಗಳು, ಎಷ್ಟು ಜನ ಕಾರ್ಪೊರೇಷನ್ ಅಧ್ಯಕ್ಷರು, ಉಪಾಧ್ಯಕ್ಷರು, ಸದಸ್ಯರುಗಳು, ಮಂತ್ರಿಗಳು, ಉಪಮಂತ್ರಿಗಳು ಹೀಗೆ ಲೆಕ್ಕ ಹಾಕುತ್ತಾ ಹೋದರೆ, ಬಹುಶಃ ಒಟ್ಟು ದೇಶಕ್ಕೆ ತೆಗೆದುಕೊಂಡರೆ 10 ಸಾವಿರ ಜನಕ್ಕಿಂತ ಕಡಿಮೆಯಾಗುವುದಿಲ್ಲ. ನಮ್ಮಲ್ಲೇ ತೆಗೆದುಕೊಂಡರೆ 500-600 ಜನರಾಗುತ್ತಾರೆ. ಇವರುಗಳ ವಿಚಾರದಲ್ಲಿ ವಿಚಾರ ಮಾಡುವುದಕ್ಕೆ ಕಮೀಷನ್ ನೇಮಕ ಮಾಡಿದರೆ ಅವರಿಗೆ ವಿಚಾರ ಮಾಡಲು 20 ವರ್ಷವಾದೀತೆಂದು ಕಾಣುತ್ತದೆ. ಯಾರು ಯಾರಿಗೆ ಏನೇನು ಹಕ್ಕುಬಾಧ್ಯತೆಗಳು ಇವೆಯೋ ಅದನ್ನು ಲೆಕ್ಕಾಚಾರ ಮಾಡಬೇಕೆಂದರೆ, ಖಂಡಿತ ಆಗತಕ್ಕಂಥ ಮಾತಲ್ಲ. ಲಂಚ ರುಷುವತ್ತು ಇಲ್ಲವೆಂದು ನಾನು ಹೇಳುವುದಕ್ಕೆ ಹೋಗುವುದಿಲ್ಲ. ಇದನ್ನು ಅನೇಕ ಕಡೆಗಳಲ್ಲಿ ಹೇಳಿದ್ದೇನೆ. ಲಂಚರುಷುವತ್ತುಗಳು ಇವತ್ತು ಇದೆಯೆಂದು ಜನಗಳಿಗೆ ಗೊತ್ತಾಗುತ್ತಿದೆ. ಆದರೆ ಪೂರ್ವಕಾಲದಲ್ಲಿಯೂ ಇದು ಮಾಮೂಲಾಗಿತ್ತು. ಎಲ್ಲೆಲ್ಲೂ ನಡೆಯುತ್ತಿತ್ತು. ಜನರು ಇದನ್ನು ಸ್ವಾಭಾವಿಕವಾಗಿ ನಡೆಯತಕ್ಕ ಮಾರ್ಗವೆಂದು ಒಪ್ಪಿಕೊಂಡಿದ್ದರು. ಸಾಮಾನ್ಯ ಜೀವನ ಪದ್ಧತಿಯಲ್ಲಿ ಇದು ಒಂದು ಭಾಗವಾಗಿತ್ತು. ಮತ್ತು ಆ ಕಾಲದ ಅಧಿಕಾರಿಗಳು ಹಾಗೆ ತೆಗೆದುಕೊಳ್ಳುವುದು ಸರಿಯೆಂದು ತಿಳಿದುಕೊಂಡಿದ್ದರು.

ಬಡವರಾಗಿದ್ದವರು ಶ್ರೀಮಂತರಾಗಿದ್ದಾರೆ. ಇಲ್ಲ ಎಂದು ಹೇಳುವುದಿಲ್ಲ. ಆದರೆ ಅವರ ಸಂಖ್ಯೆ ಬಹಳ ಕಡಿಮೆ. ಇದು ಒಂದು ರೀತಿಯಾದರೆ ಮತ್ತೊಂದು ರೀತಿಯಲ್ಲಿ ರಾಜಕೀಯವಾಗಿ ಉಪಯೋಗವಾಗುತ್ತದೆ. ತಿಳಿದೂ ತಿಳಿಯದಂತೆ ಮಾಡಬೇಕಾದ ಕರ್ತವ್ಯವೆಂದು ಹೇಳಿ ಪುನಃ ಬಂದಂತೆ ದೂರುಗಳನ್ನು ಕೊಡತಕ್ಕವರು ಕೆಲವರಿದ್ದಾರೆ. ಕೆಲವರು ಇದನ್ನು ಹೇಳಿದ ಇದ್ದರೆ ಕರ್ತವ್ಯಲೋಪವಾಗುತ್ತದೆ ಎಂದು ಊಹೆ ಮಾಡಿಕೊಂಡು ಹೇಳಿತಕ್ಕವರೂ ಇದ್ದಾರೆ. ಹೀಗೆ ಇದರ ಸತ್ಯಾಂಶವನ್ನು ಹುಡುವುದಕ್ಕೆ ಕಷ್ಟವಾಗುತ್ತವೆ.

---

ವಿಧಾನ ಸಭೆ ನಡವಳಿಕೆ: ದಿ. 26-2-66 ಪುಟ 232-235

ನನ್ನ ಮತ್ತು ನನ್ನ ಸಹೋದ್ಯೋಗಿಗಳ ಮೇಲೆ ಅರ್ಜಿ ಬಂದಿದೆ. ಅದನ್ನು ಕೂಲಂಕುಷವಾಗಿ ಪರಿಶೀಲನ ಮಾಡಿ ನೋಡಿದಾಗ ಅದರಲ್ಲಿ ಏನೂ ಸತ್ಯಾಂಶವೇ ಇರಲಿಲ್ಲ. ಆ ಬಗ್ಗೆ ಒಂದು ವರದಿಯನ್ನು ಕೇಂದ್ರ ಸರಕಾರಕ್ಕೆ ಕಳುಹಿಸಿಯೂ ಆಗಿದೆ. ಆ ರೀತಿ ಮಾಡಿರತಕ್ಕ ಆಪಾದನೆಗಳು ಏನಿವೆ, ದೂರುಗಳು ಎನಿವೆ, ಅವುಗಳಲ್ಲಿ ಅಕ್ಷರಶಃ ಏನೂ ಸತ್ಯಾಂಶವಿಲ್ಲ ಎಂದು ತಿಳಿಸಬೇಕಾಗಿ ಬಂತು. ಆದರೆ ಹತ್ತು ಜನ ರುಜು ಮಾಡಿದ ತಕ್ಷಣ ಅದರಲ್ಲಿ ಸತ್ಯಾಂಶವಿದೆ. ಎಂದು ಹೇಳುವುದ ಸರಿಯಲ್ಲ. ಇದು ವಿವೇಚನೆ ಇಲ್ಲದೆ, ಸಾಕಷ್ಟು ಅನುಭವವಿಲ್ಲದೆ, ರಾಜಕೀಯದಲ್ಲಿ ಹೇಳತಕ್ಕಂತಹ ಮಾತುಗಳು. ಆಕಾಶದಲ್ಲಿ ತೇಲಾಡತಕ್ಕವರು ಭೂಮಿಗೆ ಬರುವುದಿಲ್ಲ. ಇದೆಲ್ಲಾ ವಿಚಾರ ತಿಳಿದುಕೊಂಡು ಸಾಕಷ್ಟು ಅನುಭವದಿಂದ ಹೇಳತಕ್ಕ ಮಾತಲ್ಲ.

# ನಾಗರಿಕಾ ಸೇವಾ ಆಯೋಗದ ಕುರಿತು ಚರ್ಚೆ

## 19ನೇ ನವೆಂಬರ್ 1966

ಕೆಲವು ಸದಸ್ಯರುಗಳು ಸಮಯ ಸಿಕ್ಕಿದಾಗ ಅವಶ್ಯಕವೋ, ಅನಾವಶ್ಯಕವೋ ಸಂಬಂಧವಿದೆಯೇ, ಇಲ್ಲವೇ ಎಂಬುದನ್ನು ಯಾವುದನ್ನೂ ಸಾಕಷ್ಟು ಯೋಚನೆ ಮಾಡದೆ, ಅವಕಾಶ ಇದೆಯೆಂದು ಸರ್ಕಾರವನ್ನು ಟೀಕೆ ಮಾಡತಕ್ಕಂತಹ ಹವ್ಯಾಸವನ್ನು ಇಟ್ಟುಕೊಂಡಿದ್ದಾರೆ, ಆದರೆ ಅದಕ್ಕೂ ನಾನು ಅಭ್ಯಂತರ ಮಾಡುವುದಿಲ್ಲ.

ಸರ್ಕಾರವನ್ನು ಬಯ್ಯಬೇಕು, ಕೆಟ್ಟ ಹೆಸರು ತರಬೇಕು, ಎಂಬ ಒಂದು ಅಮಲು ಜಾಸ್ತಿಯಾಗುತ್ತಾ ಇದೆ. ಸರ್ಕಾರವನ್ನು ಟೀಕಿಸುವ ಉದ್ರೇಕರದಲ್ಲಿ ಏನು ಹೇಳುತ್ತಾರೆ, ಏನು ಹೇಳುವುದಿಲ್ಲ ಎಂದು ಗೊತ್ತಾಗುವುದಿಲ್ಲ ಈ ಒಂದು ಭಾವನೆಯನ್ನು ಉದ್ರೇಕಗೊಳಿಸಿಕೊಂಡು ಅಮಲಿನಲ್ಲಿ ಏನಾದರೂ ಹೇಳುತ್ತಾರೆ. ಅದು ಇರತಕ್ಕದ್ದು ಸ್ವಾಭಾವಿಕ.

ಟೀಕೆ ಮಾಡತಕ್ಕಂಥ ವಿಚಾರದಲ್ಲಿ ಕೂಡ ಅದಕ್ಕೆ ಯೋಗ್ಯವಾಗಿರತಕ್ಕಂಥ ಒಂದು ಸಮಯ, ಸಂದರ್ಭ, ಮಿತಿಬೇಕು, ಮಿತಿಮೀರಿ ಟೀಕೆ ಮಾಡುತ್ತಾ ಹೋದರೆ ಅದು ಚೆನ್ನಾಗಿ ಕಾಣುವುದಿಲ್ಲ. ಅದು ಸಹಜವಾಗಿಯೂ ಇರುವುದಿಲ್ಲ. ಆದುದರಿಂದ ಅಂಥಾದ್ದನ್ನು ಹೆಚ್ಚಾಗಿ ನಾವು ಗಮನದಲ್ಲಿಟ್ಟುಕೊಳ್ಳಬೇಕಾಗಿಲ್ಲ. ಯಾವುದೇ ಒಂದು ವಿಷಯದ ಬಗ್ಗೆ ಸರ್ವೇ ಸಾಧಾರಣವಾಗಿ ಟೀಕೆ ಬರುತ್ತದೆ. ಆದರೆ ಇವತ್ತಿನ ದಿವಸ ಲೋಕಸೇವಾ ಆಯೋಗದ ಸದಸ್ಯರು ಮೇಲೆ ಯಾವುದೆ ರೀತಿಯ ಟೀಕೆ ಬಂದರೆ ಅದು ಸತ್ಯಕ್ಕೆ ಬಹು ದೂರವಾದುದು ಎಂದು ನಾನು ಹೇಳುತ್ತೇನೆ. ಲೋಕಸೇವಾ ಆಯೋಗಕ್ಕೆ ನೇಮಕವಾಗಿರತಕ್ಕಂಥ ಈ ಸದಸ್ಯರು ಎಲ್ಲರೂ ಯೋಗ್ಯರೂ ನಿಷ್ಪಕ್ಷಪಾತಿಗಳೂ ಹೌದು, ಅವರೆಲ್ಲರೂ ಗೌರವಕ್ಕೆ ಪಾತ್ರರಾಗಿದ್ದಾರೆ. ಕಳೆದ ನಾಲ್ಕು ವರ್ಷಗಳಿಂದ ಅವರ ಮೇಲೆ ಒಂದೂ ಅಪಾದನೆ ಬಂದಿಲ್ಲ ಎಂಬುದನ್ನು ಗಮನದಲ್ಲಿಟ್ಟುಕೊಳ್ಳಬೇಕು. ಕೆಲವು ತಪ್ಪು ಮಾಡಿರಬಹುದು. ಅವರು ಹೇಳಿದ್ದನ್ನು ಸರಕಾರ ಒಪ್ಪದೇ ಇರಬಹುದು. ಸರಕಾರಕ್ಕೆ ಈ ಅಧಿಕಾರ ಇದೆ. ಲೋಕಸೇವಾ ಆಯೋಗ ಅಭ್ಯರ್ಥಿಗಳು ಸಲಹಾಂಗವಾಗಿದೆ. ಇಷ್ಟು ಜನ ಅಭ್ಯರ್ಥಿಗಳು ಬೇಕು ಎಂದು ಸರಕಾರ ತಿಳಿಸಿದರೆ ಅವರು ಶಿಫಾರಸ್ಸು ಮಾಡುತ್ತಾರೆ. ಆದರೆ ಶಿಸ್ತಿಗೆ ವಿರೋಧವಾಗಿ ನಡೆದವರ ಬಗ್ಗೆ ಏನು ಮಾಡಬೇಕು ಎಂದು ಕೇಳತಕ್ಕಂಥಾದ್ದು ನಮ್ಮ ಕರ್ತವ್ಯ. ನಾವು ಕೇಳುತ್ತೇವೆ. ಅವರು ಹೇಳುವುದಕ್ಕೆ ಇದ್ದಾರೆ, ಆದರೆ ಅವರು ಹೇಳಿದ್ದನ್ನು ನಾವು ಕೇಳಲೇಬೇಕು ಎಂದು ಇಲ್ಲ. ಕೆಲವು ಸಲ ಅವರು ಹೇಳಿದ್ದನ್ನು ನಾವು ಒಪ್ಪಬಹುದು, ಅಥವಾ ಒಪ್ಪದೇ ಇರಬಹುದು. ಕಳೆದ ಎರಡು ವರ್ಷದ ಅವಧಿಯಲ್ಲಿ

---

ವಿಧಾನ ಸಭೆ ನಡವಳಿಕೆ: ದಿ. 19-11-66 ಪುಟ 178-181

400 ಕೇಸುಗಳು ಇದ್ದವು. ಅವುಗಳಲ್ಲಿ 11 ಮತ್ತು 4 ಅಂದರೆ, 15 ಕೇಸುಗಳಲ್ಲಿ ಸರಕಾರ ಅವರ ಅಭಿಪ್ರಾಯವನ್ನು ಪೂರ್ತಿಯಾಗಿ ಒಪ್ಪಿಲ್ಲ. ಅದೂ ಕೂಡ ಶಿಸ್ತು ಭಂಗ ಮಾಡಿದ ಕೇಸುಗಳಲ್ಲಿ ಎಷ್ಟು ಶಿಕ್ಷೆ ಕೊಡಬೇಕು ಎಂಬ ವಿಚಾರದಲ್ಲಿ ಮಾತ್ರ. ಈ ವಿಚಾರ ಹೀಗಿರುವಾಗ ಅವರು ಸರಿಯಾಗಿ ಕೆಲಸ ಮಾಡುವುದಕ್ಕೆ ಅವಕಾಶ ಕೊಡುವುದಿಲ್ಲ, ಹಸ್ತಕ್ಷೇಪ ಮಾಡುತ್ತಾರೆ ಎಂದು ಹೇಳುವುದು ತೀರ ಸುಳ್ಳು, ಅದು ಸತ್ಯಕ್ಕೆ ಸಾವಿರಾರೂ ಮೈಲಿ ದೂರ. ಆ ರೀತಿ ಏನಾದರೂ ಹಸ್ತಕ್ಷೇಪ ಮಾಡಿದ ವಿಚಾರ ಇದ್ದರೆ, ಸದಸ್ಯರು ನನ್ನ ಹತ್ತಿರ ಬಂದು ಕಿವಿಯಲ್ಲಿ ಹೇಳಲಿ. ಯಾವುದೇ ಸದಸ್ಯ ಇರಲಿ, ಮಂತ್ರಿಯೇ ಇರಲಿ, ಹಸ್ತಕ್ಷೇಪ ಮಾಡುವುದಕ್ಕೆ ಪ್ರಯತ್ನ ಪಟ್ಟಿದ್ದರೆ, ತಮಗೆ ಬೇಕಾದವರ ನೇಮಕ ಮಾಡುವುದರ ಬಗ್ಗೆ ಪ್ರಭಾವ ಬೀರಿದ್ದರೆ, ಅಂಥವರು ಮಂತ್ರಿ ಸ್ಥಾನದಲ್ಲಿ ಇರುವುದಕ್ಕೆ ಸಾಧ್ಯವಿಲ್ಲ. ಅಂಥ ಮನುಷ್ಯ ಇಲ್ಲಿ ಇರುವುದಕ್ಕೆ ಲಾಯಖ್ ಅಲ್ಲ; ಅಂಥ ವಿಷಯ ನನ್ನ ಹತ್ತಿರ ಬಂದು ಹೇಳಲಿ, ಸದಸ್ಯರು ಆಕ್ಷೇಪಣೆ ತಂದಿದ್ದಾರೆ, ನಾವು ವಿಚಾರ ಮಾಡಿದ್ದೇವೆ ಎಂದು ಈ ಸಭೆಯ ಮುಂದೆ ನಾನು ಧೈರ್ಯವಾಗಿ ಅಭಿಮಾನದಿಂದ ಹೇಳುತ್ತೇನೆ, ಅಂಥ ವಿಚಾರ ಯಾರ ಮೇಲೆಯೇ ಇರಲಿ ಯಾವ ಸದಸ್ಯರು ಮೇಲೆಯೇ ಇರಲಿ, ಅದು ಸತ್ಯಕ್ಕೆ ದೂರವಾದುದು. ಲೋಕಸೇವಾ ಆಯೋಗದ ಸದಸ್ಯರು ಚೆನ್ನಾಗಿ ನಡೆದುಕೊಂಡು ಬಂದಿದ್ದಾರೆ. ಯಾರೂ ಹಸ್ತಕ್ಷೇಪ ಮಾಡಿಲ್ಲ, ಹಸ್ತಕ್ಷೇಪಕ್ಕೆ ಭಯಪಟ್ಟುಕೊಂಡು ನಡೆದಿಲ್ಲ ಎಂಬುದು ಈ ವರದಿಯಿಂದ ಸ್ಪಷ್ಟವಾಗಿ ಗೊತ್ತಾಗುತ್ತದೆ. ಅವರು ಯಾವ ದಾಕ್ಷಿಣ್ಯಕ್ಕೂ ಒಳಪಟ್ಟಿಲ್ಲ. ದಾಕ್ಷಿಣ್ಯಕ್ಕೆ ಒಳಗಾಗದೇ ಇರುವುದರಿಂದ ಅವರು ಸ್ಪಷ್ಟವಾಗಿ ಧೈರ್ಯದಿಂದ ಸರಕಾರ ತಪ್ಪು ಮಾಡಿದೆ ಎಂದು ಹೇಳುತ್ತಾರೆ. ಹೀಗಿರುವಾಗ ಹಸ್ತಕ್ಷೇಪ ಮಾಡಿದೆ ಎಂದು ಹೇಳುವುದು ಒಪ್ಪತಕ್ಕಂಥ ಮಾತಲ್ಲ, ಮಾನ್ಯ ಸದಸ್ಯರು ಇದನ್ನು ಗಮನದಲ್ಲಿಟ್ಟುಕೊಳಬೇಕು, ಇದು ಅರ್ಥವಿಲ್ಲದ ಮಾತು ಎಂದು.

ಮತ್ತೊಂದು ವರ್ಗ ಮತ್ತು ನೇಮಕಾತಿ ನಿಯಮಗಳ ವಿಷಯವೆಂದರೆ ವಿಚಾರದಲ್ಲಿ ಸ್ವಲ್ಪ ತೊಂದರೆಯಾಗಿದೆ. ಐದು ಭಾಗಗಳು ಸೇರಿ ಹೊಸ ಮೈಸೂರು ರಾಜ್ಯ ರಚನೆಯಾದ ಮೇಲೆ ಇದರ ಬಗ್ಗೆ ಒಂದೇ ಸಮನೇ ಸರಕಾರ ಪ್ರಯತ್ನ ಮಾಡುತ್ತಲೇ ಇದೆ. ಈ ವಿಚಾರದಲ್ಲೆ ಕೆಲವರು ಹೈಕೋರ್ಟ್‌ಗೆ ಹೋಗಿರುವುದರಿಂದ ತೊಂದರೆಯಾಗಿದೆ. ಸಾಮಾನ್ಯವಾಗಿ ಎಲ್ಲಾ ಇಲಾಖೆಗಳ ವರ್ಗ ಮತ್ತು ನೇಮಕಾತಿ ನಿಯಮ ತಯಾರಾಗಿದ್ದು. ಕೇವಲ ಏಳು ಇಲಾಖೆಗಳ ಬಗ್ಗೆ ಮಾತ್ರ ಉಳಿದಿವೆ. ಸಾರ್ವಜನಿಕ ನಿರ್ದೇಶನಾ ವಿಭಾಗ ಮತ್ತು ರಾಷ್ಟ್ರೀಯ ಕೆಡೆಟ್ ಎಂದು ಶಿಕ್ಷಣ ಇಲಾಖೆಯಲ್ಲಿ ಎರಡು ಭಾಗಗಳಾಗಿವೆ. ಇದನ್ನು ಕಳಿಸಿದ್ದೇನೆ. ಇದರ ಬಗ್ಗೆ ಅವರು ತಮ್ಮ ಅಭಿಪ್ರಾಯ ಹೇಳಿದ್ದಾರೆ. ಅದು ಕ್ಯಾಬಿನೆಟ್ ಮುಂದೆ ಬಂದಾಗ, ಸರಕಾರ ಆಲೋಚನೆ ಮಾಡುತ್ತದೆ. ಡೈರಿ ಪ್ರಾಜೆಕ್ಟ ಬಗ್ಗೆ ಸಹ ರೂಲ್ಸ್ ಮಾಡಿ ಕಳಿಸಿದ್ದೇವೆ. ಬಹುಶಃ ಅವರು ಇಷ್ಟರಲ್ಲಿಯೇ ವಾಪಸ್ಸು ಕಳಿಸುತ್ತಾರೆ. ಗೃಹ ಇಲಾಖೆಯ ಬಗ್ಗೆ ರೂಲ್ಸ್ ಮಾಡಿ ಕಳಿಸಿದ್ದೇವೆ. ಅವರ ಅಭಿಪ್ರಾಯ ಕೇಳಿದ್ದೇವೆ. ಅವರ ಅಭಿಪ್ರಾಯ ಬಂದಿದೆ. ಇನ್ನು ಮುಂದಿನ ಕ್ರಮ ನಡೆಯಬೇಕಾದರೆ. ಅದೇ ರೀತಿ

ವಾಣಿಜ್ಯ ಮತ್ತು ಕೈಗಾರಿಕೆ ಮತ್ತು ಉಗ್ರಾಣ ಮತ್ತು ಕರೀದಿ ಸಮಿತಿಕಾ ವಿಚಾರದಲ್ಲಿ ಕೂಡ ರೂಲ್ಸ್ ಮಾಡಿ ಕಳಿಸಿದ್ದೇವೆ. ಅವರು ಅಭಿಪ್ರಾಯ ತಿಳಿಸಿದ್ದಾರೆ. ಅದು ಸರಕಾರದ ಆಲೋಚನೆಯಲ್ಲಿದೆ. ನಾಗರೀಕ ಸರಬರಾಜು ನಿಯಂತ್ರಕಾ ಬಗ್ಗೆ ರೂಲ್ಸ್ ಆಗಿಲ್ಲ. ಇದು ಒಂದೇ ಒಂದು ಡಿಪಾರ್ಟ್‌ಮೆಂಟಿನದು ರೂಲ್ಸ್ ಆಗಿಲ್ಲ. ಇದೊಂದು ಸಣ್ಣ ಇಲಾಖೆ. ಔಷದ ನಿಯಂತ್ರಣ ಇಲಾಖೆ ಬಗ್ಗೆ ರೂಲ್ಸ್ ಮಾಡಿ ಕಳಿಸಿದ್ದು ವಾಪಸ್ಸು ಬಂದಿದೆ. ಈ ವಿಚಾರದಲ್ಲಿ ಸರಕಾರ ನಿರ್ಲಕ್ಷ್ಯ ಮಾಡಿಲ್ಲ, ಇನ್ನು ಎರಡು ಮೂರು ತಿಂಗಳುಗಳಲ್ಲಿ ಈ ಕೆಲಸ ಬಗೆಹರಿಯುತ್ತದೆಂದು ನನಗೆ ಅನಿಸುತ್ತದೆ. ಈ ಕೆಲಸದಲ್ಲಿ ತಡೆ ಆಗಿದೆ. ಇದಕ್ಕೆ ಕಾರಣವೇನೆಂದರೆ, ಇದರಲ್ಲಿ ಅನೇಕ ರೀತಿಯ ಕುಂದುಕೊರತೆಗಳು ಇವೆ. ಒಂದು ಭಾಗದವರು ನಮಗೆ ಅನ್ಯಾಯವಾಗಿದೆ ಎಂದು ಹೇಳಿದರೆ, ಮತ್ತೊಂದು ಭಾಗದವರು ನಮಗೆ ಅನ್ಯಾಯ ವಾಗಿದೆ ಎಂದು ಹೇಳುತ್ತಾರೆ. ಎಲ್ಲವನ್ನೂ ಸರಿಯಾಗಿ ಕ್ರೋಡಿಕರಿಸುವುದಕ್ಕೆ ಸಾಕಷ್ಟು ಆಲೋಚನೆ ಮಾಡಿ ರೂಲ್ಸ್ ಮಾಡಿ ಕಳಿಸಿದ್ದೇವೆ. ಅದನ್ನು ಒಪ್ಪಿಕೊಂಡು ಅಭಿಪ್ರಾಯ ತಿಳಿಸಿದ್ದಾರೆ. ಇನ್ನು ಯಾವ ಕಷ್ಟ ಉಳಿಯುವುದಿಲ್ಲ ಎಂದು ನನಗೆ ಅನಿಸುತ್ತದೆ.

## ಆಡಳಿತ ಭಾಷೆ ಕುರಿತ ಚರ್ಚೆ

### 5ನೇ ಸೆಪ್ಟಂಬರ್ 1963

ಆಡಳಿತ ಭಾಷೆ ಕನ್ನಡವಾಗಬೇಕೆಂದಿದ್ದರೂ ಅದು ಪರಿಪೂರ್ಣವಾಗಿ ಆಗಬೇಕಾದರೆ ಕನ್ನಡದಲ್ಲಿ ನಿಘಂಟು ಆಗಬೇಕು, ವಿಶ್ವಕೋಶವಾಗಬೇಕು. ಎಲ್ಲಾ ಹಂತಗಳಲ್ಲಿಯೂ ,ಅದರಲ್ಲೂ ವಿದ್ಯಾಭ್ಯಾಸ ಕ್ರಮದಲ್ಲಿ ಮುಖ್ಯವಾಗಿ ಕನ್ನಡ ಭಾಷೆಯನ್ನೇ ಉಪಯೋಗಿಸಬೇಕು, ಎಂಬುದಾಗಿ ನಾನಾ ಉಪಯುಕ್ತವಾದ ಸಲಹೆಗಳನ್ನು ಮಾಡಿದ್ದಾರೆ. ಅವೆಲ್ಲವೂ ಯೋಗ್ಯವಾದುವಾದ್ದರಿಂದ ಅವನ್ನು ಸರ್ಕಾರದವರು ಗಂಭಿರವಾಗಿ ಆಲೋಚನೆ ಮಾಡಬೇಕಾದುದು ಅವಶ್ಯಕ. ಸಾಮಾನ್ಯವಾಗಿ ಎಲ್ಲರೂ ಈ ಮಸೂದೆಯನ್ನು ಸ್ವಾಗತಿಸಿದ್ದಾರೆ.

ನಾನು ಮೊದಲು ಅರಿಕೆ ಮಾಡಿಕೊಂಡುವುದೇನೆಂದರೆ, ಈ ಮಸೂದೆ ಈಗಾಗಲೇ ಸಾಕಷ್ಟು ತಡವಾಗಿ ಬಂದಿದೆ. ಆಯಾ ಪ್ರದೇಶದಲ್ಲಿ ಪ್ರಜಾ ಪ್ರಭುತ್ವ ಆಡಳಿತ ಚೆನ್ನಾಗಿ ಯಶಸ್ವಿಯಾಗಿ ನಡೆಯಬೇಕಾದರೆ, ಪ್ರಜೆಗಳ ಅಭಿಪ್ರಾಯಕ್ಕೆ ಮನ್ನಣೆ ಇರಬೇಕು. ಬಹು ಸಂಖ್ಯಾತರ ಭಾಷೆಗೆ ಮನ್ನಣೆ ಮೊದಲು ನೀಡಲೇಬೇಕು. ತಡವಾದರೂ ಈ ಹೊತ್ತು ಈ ಮಸೂದೆ ಬಂದಿದೆ, ಇದಕ್ಕೆ ಎಲ್ಲ ಕಡೆಯಿಂದಲೂ ಸ್ವಾಗತ ಬಂದಿರುವುದರಿಂದ ಸಂತೋಷವಾಗಿದೆ. ಒಬ್ಬ ಸದಸ್ಯರು ವಿರೋಧ ಮಾಡಿದಿದ್ದರೆ ಇನ್ನೂ ಚೆನ್ನಾಗಿತ್ತು. ಆ ಮನೋಭಾವಕ್ಕೆ ಏನು ಹೇಳಬೇಕೋ ಗೊತ್ತಿಲ್ಲ, ಇಂಗ್ಲೀಷನ್ನೇ ಮುಂದುವರಿಸುವುದಕ್ಕೆ ಪ್ರಯತ್ನ ಮಾಡುತ್ತಿದ್ದೀರಿ ಎಂದು ಹೇಳಿದರು. ಇದನ್ನು ಮುಂದುವರಿಸುವುದು ಅವಶ್ಯಕ. ನೂರೈವತ್ತು ಇನ್ನೂರು ವರ್ಷಗಳಿಂದ ನಮ್ಮ ಜನ ಜೀವನದಲ್ಲಿ ಅದರಲ್ಲಿಯೂ ವಿಧ್ಯಾವಂತರಲ್ಲಿ ಹಾಸುಹೊಕ್ಕಾಗಿ ಇಂಗ್ಲೀಷ್ ಬೆಳೆದುಕೊಂಡು ಬಂದಿದೆ. ಪದವೀಧರರೆಲ್ಲರೂ ಅಭ್ಯಾಸ ಮಾಡಿದ್ದಾರೆ. ಹೀಗಿರುವಾಗ ಕಾನೂನುಗಳಲ್ಲಿ, ವಿಶ್ವವಿದ್ಯಾನಿಲಯಗಳಲ್ಲಿ ಎಲ್ಲ ಕಡೆಯೂ ಒಂದೇ ದಿವಸದಲ್ಲಿ ಇದನ್ನು ಪೂರ್ತಿಯಾಗಿ ಬಿಟ್ಟುಬಿಡಬೇಕೆಂದು ಹೇಳುವುದು ಸಾಧುವಲ್ಲ: ವ್ಯವಹಾರ ದೃಷ್ಟಿಯಿಂದ ಇದು ಸರಿಯಲ್ಲ. ಆದುದರಿಂದಲೇ ಹದಿನೈದು ವರ್ಷ ಕಾಲಾವಕಾಶ ಕೊಟ್ಟಿದ್ದರೂ, ಈ ಹದಿನೈದು ವರ್ಷಗಳಲ್ಲಿ ಸಾಕಷ್ಟು ಮಟ್ಟಿಗೆ ಹಿಂದಿ ಭಾಷೆ ಮತ್ತು ಇತರ ಭಾಷೆಗಳಲ್ಲಿ ಶಬ್ದಕೋಶ ಬೆಳೆಯಲಿಲ್ಲ, ಶಬ್ದಬಂಡಾರ ಬೆಳೆಯಲಿಲ್ಲ. ಟೆಕ್ನಿಕಲ್ ಎಂದರೆ ಪಾರಿಭಾಷಿಕ ಪದಗಳು ಸಾಕಷ್ಟು ಬೆಳೆಯಲಿಲ್ಲ. ಯಾರ ಮಾತೃಭಾಷೆ ಹಿಂದಿಯಾಗಿದೆಯೋ, ಯಾರು ಹಿಂದಿಯನ್ನು ಚೆನ್ನಾಗಿ ಬಲ್ಲರೋ ಅವರಿಂದ ಕೂಡ ಇನ್ನೂ ಕೆಲಕಾಲ ಇಂಗ್ಲೀಷ್‌ನಲ್ಲೇ ವ್ಯವಹಾರ ನಡೆಯುವುದು ಅವಶ್ಯಕ ಎಂದು ಒತ್ತಾಯ ಬಂದಿದೆ. ಅದರಲ್ಲಿಯೂ ಪೂರ್ವ ಮತ್ತು ದಕ್ಷಿಣ ಭಾರತದಲ್ಲಿ ಇನ್ನೂ ಕೆಲಕಾಲ ಇಂಗ್ಲೀಷನ್ನು ಮುಂದುವರಿಸಬೇಕೆಂದು ಜನನಾಯಕರು ಅಭಿಪ್ರಾಯ ಪಟ್ಟಿದ್ದಾರೆ. ಆದುದರಿಂದ ಇದು ಅವಶ್ಯಕ. ಯಾರೂ ಇಂಗ್ಲೀಷ್‌ನ್ನು ಒಪ್ಪಿಕೊಂಡು ವರ್ಷಾಂತರ, ಶತಮಾನ ಕಾಲ ಅದರಲ್ಲಿಯೇ ವ್ಯವಹಾರ

---

ವಿಧಾನ ಸಭೆ ನಡವಳಿಕೆ: ದಿ. 5-9-63 ಪುಟ 2982-2985

ನಡೆಯಬೇಕೆಂದು ಇಚ್ಛಿಪಡುತ್ತಿಲ್ಲ. ಇಂಗ್ಲೀಷ್ ಭಾಷೆಯನ್ನು ಕಂಡರೆ ವ್ಯಾಮೋಹವಿದ್ದರೂ ಅದು ನಮ್ಮ ಭಾಷೆಯೆಂದು ಒಪ್ಪಿಲ್ಲ. ಎಂಟನೆಯ ಷೆಡ್ಯೂಲ್‌ನಲ್ಲಿ ಇದು ರಾಷ್ಟ್ರ ಭಾಷೆಯಾಗಬೇಕೆಂದು ಅಪೇಕ್ಷೆಪಟ್ಟು ಒಪ್ಪಿಲ್ಲ. ಇದು ಇನ್ನೂ ಕೆಲಕಾಲ ಉಳಿಯಬೇಕೆಂದಿದೆಯೇ ಹೊರತು ಶಾಶ್ವತವಾಗಿ ಆಡಳಿತ ಭಾಷೆಯಾಗಿ ಇದರಲ್ಲೇ ವ್ಯವಹಾರ ನಡೆಯಬೇಕೆಂದು ಒಪ್ಪುವುದಿಲ್ಲ. ಆದರೂ ಈ ವಿಶೇಷ ಪರಿಸ್ಥಿತಿಯಲ್ಲಿ ಇದು ಈಗಿರುವಂತೆ ನಡೆಯಬೇಕಾಗುತ್ತದೆ. ಹಿಂದೆ ಶ್ರೀಮಾನ್ ಪಾಟೀಲರು ಮಾತನಾಡುತ್ತ ಇವರಿಗೆ ಇಂಗ್ಲೀಷ್‌ನಲ್ಲಿ ವ್ಯಾಮೋಹವಿದೆ, ಆದರೆ ಅಕ್ಕ ಪಕ್ಕದಲ್ಲಿರುವ ಭಾಷೆಗಳಲ್ಲಿ ಮಾತ್ರ ಇಲ್ಲವೆಂದು ಹೇಳಿದರು. ಅದು ಸರಿಯಲ್ಲ ಹಾಗಲ್ಲ ಆಡಳಿತ ದೃಷ್ಟಿಯಿಂದ ಮರಾಠಿ, ತೆಲುಗು, ತಮಿಳು, ಮಲಯಾಳಿ ಈ ಎಲ್ಲದರಲ್ಲಿಯೂ ಅಭಿಮಾನವಿದೆ. ನಮ್ಮ ಭಾಷೆ ರಾಜ್ಯಾಂಗದಲ್ಲಿ ಸೇರುವ 11 ಭಾಷೆಗಳಲ್ಲಿ ಸೇರಿದೆ. ಈ ಎಲ್ಲಾ ಭಾಷೆಗಳಲ್ಲಿಯೂ ನಮಗೆ ಸಾಕಷ್ಟು ವ್ಯಾಮೋಹವಿದೆ. ಇಂಗ್ಲೀಷ್ ಭಾಷೆ ಬೇಕು, ಪಕ್ಕದ ಭಾಷೆಗಳು ಬೇಕಾಗಿಲ್ಲ ಎಂದು ಅವರು ಹೇಳಿದರು. ಅದು ಸರಿಯಲ್ಲ. ನಮಗೆ ಎಲ್ಲದರಲ್ಲಿಯೂ ಪ್ರೀತಿಯುಂಟು. ಈ ರೀತಿ ವಾದವನ್ನು ಅವರು ಮಾಡಬಾರದು. ಆ ಮಾನ್ಯ ಸದಸ್ಯರು ಕಛೇರಿಗೆ ಹೋಗುತ್ತಾರೆ, ಕೋರ್ಟಿಗೆ ಹೋಗುತ್ತಾರೆ, ವ್ಯವಹಾರ ನಡೆಸುತ್ತಾರೆ, ಅಲ್ಲಿ ಮಾತ್ರ ಕನ್ನಡ ಬೇಕು, ಇಲ್ಲಿ ಮಾತ್ರ ಬೇಡವೇ ?

ಜನರ ಸೇವೆ ಮಾಡುವವರು ಆ ಭಾಷೆ ಬರುವವರು ಮಾತ್ರವಲ್ಲ ಅಥವಾ ಭಾಷೆ ಬಂದರೆ ಮಾತ್ರ ಸಾಲದು, ಆ ಪ್ರದೇಶದ ಜನರ ಸೇವೆ ಮುಖ್ಯ. ಆದುದರಿಂದ ಇಲ್ಲಿ ಕನ್ನಡದಲ್ಲಿ ಮಾತನಾಡದಿದ್ದರೆ ಅದರಿಂದ ಅಲ್ಲೋಲ ಕಲ್ಲೋಲವಾಗುವುದಿಲ್ಲ. ಯಾವ ಭಾಷೆಯಲ್ಲಿ ಮಾತನಾಡಿದರೆ ಎಲ್ಲರಿಗೂ ತಿಳಿಯುತ್ತದೆಯೋ ಅದನ್ನು ತಿಳಿದುಕೊಳ್ಳುವುದು ಉತ್ತಮ.

ಈ ಸಮಯ ಅಧಿಕೃತ ಭಾಷೆಯ ಈ ಮಸೂದೆಯನ್ನು ತಂದಿದೆ. ಯಾವ ಜನರು ಹೆಚ್ಚಾಗಿ ಮಾತನಾಡುತ್ತಾರೋ ಆ ಭಾಷೆಯಲ್ಲಿ ಆಡಳಿತ ನಡೆಸುವುದು ಅವಶ್ಯಕ. ಓಗೆಂದ ಮಾತ್ರಕ್ಕೆ ಅಲ್ಪಸಂಖ್ಯಾತರು ಮಾತನಾಡುವ ಭಾಷೆಯನ್ನಾಗಲೀ ಅವರನ್ನಾಗಲೀ ತಾತ್ಸಾರ ಮಾಡುವುದು ನಮ್ಮ ಉದ್ದೇಶವಲ್ಲ. ಮೈಸೂರು ಸರ್ಕಾರದವರು ಯಾವತ್ತೂ ಅಲ್ಪಸಂಖ್ಯಾತರಿಗೆ ಅನ್ಯಾಯ ಮಾಡಿಲ್ಲ. ಆ ಮಾನ್ಯ ಸದಸ್ಯರ ಪ್ರದೇಶದಲ್ಲಿ ಮೊದಲು ಎಷ್ಟು ಮರಾಠಿ ಶಾಲೆಗಳಿದ್ದವೋ, ಎಷ್ಟು ವಿದ್ಯಾರ್ಥಿಗಳಿದ್ದರೋ ಎಷ್ಟು ಕಟ್ಟಡಗಳಿದ್ದವೋ, ಈಗ ಅದಕ್ಕಿಂತ ಶೇಕಡ 50-60 ರಷ್ಟು ಜಾಸ್ತಿಯಾಗಿವೆ. ಆದುದರಿಂದ ನನ್ನ ಆ ಸ್ನೇಹಿತರು ಎಲ್ಲ ಸಂದರ್ಭಗಳಲ್ಲಿಯೂ ರಾಜಕೀಯ ಮಾಡುವುದು ಸರಿಯಲ್ಲ. ಇದರಿಂದ ಯಾರ ಸೇವೆ ಮಾಡಬೇಕೆಂದು ಅವರು ಬಂದಿದ್ದಾರೋ ಅದು ಆಗುವುದಿಲ್ಲ.

ಈ ಹೊತ್ತು ಮಸೂದೆ ಅಂಗೀಕೃತವಾಗಿ ಕಾನೂನಾದರೆ ನಾಳೆಯಿಂದಲೇ ಈಗಿರುವ

ಎಲ್ಲವನ್ನೂ, ಕೂಲಂಕಷವಾಗಿ ಆಲೋಚನೆ ಮಾಡಿ ಇದನ್ನು ತಂದಿದ್ದೇವೆ. ಆದಷ್ಟು ಕಡಿಮೆ ಕಾಲವನ್ನು ತೆಗೆದುಕೊಂಡು ಅಧಿಕೃತ ಭಾಷೆ ಕನ್ನಡ ಆಗಬೇಕೆಂಬುದನ್ನು ಕಾರ್ಯರೂಪಕ್ಕೆ ತರಲು ಪ್ರಯತ್ನ ಮಾಡುತ್ತೇವೆಂದು ಆಶ್ವಾಸನೆ ಕೊಡುತ್ತಿದ್ದೇನೆ.

ಇದನ್ನು ಸದಸ್ಯರೆಲ್ಲರೂ ಒಪ್ಪಬೇಕೆಂದು ಕಳಕಳಿಯಿಂದ ಕೇಳುತ್ತಿದ್ದೇನೆ. ಏನೋ ಕಾರಣ ಹೇಳಿ ಮುಂದೆ ಹಾಕಬೇಕೆಂಬ ಉದ್ದೇಶವಿಲ್ಲ. ಇದು ಮಾಯಾಮೃಗದಂತಿದೆಯೆಂದು ಕೆಲವರು ಹೇಳಿದರು. ಪಾಪ ಅವರಿಗೆ ಸಿಕ್ಕಿದುದೆಲ್ಲವೂ ಮಾಯಾಮೃಗವೋ ಏನೋ. ಈ ಸಭೆಯಲ್ಲಿಯೂ ಹೊರಗೂ ಯಾರಿಗೆ ಕನ್ನಡದಲ್ಲಿ ಎಷ್ಟು ಅಭಿಮಾನವಿದೆಯೋ ಅಷ್ಟೇ ಅಭಿಮಾನ ನಮ್ಮೆಲ್ಲರಿಗೂ ಇದೆ. ಕನ್ನಡ ಭಾಷೆ ರಾಜ್ಯ ಭಾಷೆ, ಆಡಳಿತ ಭಾಷೆಯಾಗಬೇಕು ಇದಕ್ಕೆ ಎಷ್ಟು ಪ್ರಯತ್ನ ಮಾಡಬೇಕೋ ಅಷ್ಟನ್ನೂ ಮಾಡುವುದು ಸರ್ಕಾರ ಹಾಗೂ ಜನತೆಯ ಕರ್ತವ್ಯ. ಆದಷ್ಟು ಬೇಗ ಯಾವ ಅಡ್ಡಿ ಆತಂಕವೂ ಇಲ್ಲದಂತೆ ಜಾರಿಗೆ ತರುವುದಕ್ಕೆ ಪ್ರಯತ್ನ ನಡೆಯುತ್ತಿದೆ. ಕನ್ನಡದಲ್ಲಿ ಸಾಹಿತ್ಯದ ಕೊರತೆಯಿಲ್ಲ. ಬೇರೆ ಯಾವ ಭಾಷೆಯನ್ನು ತೆಗೆದುಕೊಂಡರೂ ಅದಾವುದಕ್ಕೂ ಕಡಿಮೆಯಿಲ್ಲದಷ್ಟು ಸಾಹಿತ್ಯ ಕನ್ನಡದಲ್ಲಿದೆ.

ಅತ್ಯಂತ ದೊಡ್ಡ ಸಾಹಿತ್ಯ ಕನ್ನಡದಲ್ಲಿದೆ : ಸಾವಿರಾರು ವರ್ಷಗಳಿಂದ ಬೆಳೆದುಬಂದಿರುವ ಸಾಹಿತ್ಯವಿದೆ. ಕೆಲವು ಶಬ್ದಗಳ ಅಭಾವದಿಂದ ಅದನ್ನು ಮುಂದೂಡಬೇಕೆಂಬ ಉದ್ದೇಶ ಯಾರಿಗೂ ಇಲ್ಲ. ಆದಷ್ಟು ಜಾಗ್ರತೆ ಕನ್ನಡವನ್ನು ಆಡಳಿತ ಭಾಷೆಯಾಗಿ ಮಾಡಬೇಕು. ಆದಷ್ಟು ಜಾಗ್ರತೆ ಎಲ್ಲ ಕಡೆಯೂ ಜಾರಿಗೆ ಬರಬೇಕು. ಕನ್ನಡವು ಆಡಳಿತ ಭಾಷೆಯಾಗುವುದಕ್ಕೆ ಸರ್ವ ಪ್ರಯತ್ನವನ್ನೂ ಮಾಡುತ್ತೇವೆಂದು ಅರಿಕೆ ಮಾಡಿಕೊಳ್ಳುತ್ತೇವೆ.

ಇಂಗ್ಲೀಷ್ ಭಾಷೆಯ ವಿಚಾರದಲ್ಲಿ ಆಗಲೇ ಅರಿಕೆ ಮಾಡಕೊಂಡಿದ್ದೇನೆ. ಕಾರಣಾಂತರದಿಂದ ಕೆಲವು ಕಾಲದಿಂದ ಇರುವುದು ಶಾಶ್ವತವಾಗಿ ಉಳಿಯಬೇಕು, ಕಾನೂನು ಮಾಡತಕ್ಕ ಭಾಷೆಯಾಗಿ ಉಳಿಯಬೇಕು ಎಂದು ಉದ್ದೇಶವಲ್ಲ. ಇವತ್ತೂ ನಾವು ಮಾಡತಕ್ಕ ಕಾನೂನುಗಳು ಕೆಲವು ಕೇಂದ್ರ ಸರ್ಕಾರಕ್ಕೆ ಸಂಬಂಧಪಟ್ಟಿರತಕ್ಕವಾಗಿರುತ್ತವೆ. ಕೆಲವು ಬೇರೆ ರಾಜ್ಯಗಳಿಗೆ ಸಂಬಂಧಪಟ್ಟಿರತಕ್ಕದ್ದಿರುತ್ತವೆ. ಆದುದರಿಂದ ಕೆಲವು ದಿನ ಇಂಗ್ಲೀಷ್ ಭಾಷೆಯನ್ನು ಉಳಿಸಿಕೊಂಡು ಬರುತ್ತೇವೆ.

## ಆಡಳಿತ ಭಾಷೆ - ಪ್ರಶ್ನೋತ್ತರ

## 29ನೇ ಜೂನ್ 1967

ಶ್ರೀ ವಾಟಾಳ್ ನಾಗರಾಜ್ - ಪ್ರತಿ ಇಲಾಖೆಯಲ್ಲಿಯೂ ಇಂಗ್ಲೀಷ್ ಬಿಟ್ಟು ಕನ್ನಡದಲ್ಲಿಯೇ ಕಾರ್ಯಕಲಾಪವನ್ನು ನಡೆಸುವುದಕ್ಕೆ ಏನು ತೊಂದರೆ ಇದೆ, ಸ್ವಾಮಿ?

ಶ್ರೀ ಎಸ್. ನಿಜಲಿಂಗಪ್ಪ - ಕೆಲವು ಇಲಾಖೆಗಳಲ್ಲಿ ಪ್ರಾರಂಭ ಮಾಡಿದ್ದೇವೆ, ಹಾಗೂ ಕೆಲವು ಜಿಲ್ಲೆಗಳಲ್ಲಿಯೂ ಪ್ರಾರಂಭ ಮಾಡಿ ಆಯಿತು. ಆದರೆ ಸಂಬಂಧಪಟ್ಟ ಜಿಲ್ಲಾಧಿಕಾರಿಗಳು ಮತ್ತು ಅಧಿಕಾರಿಗಳು ಸಾಕಷ್ಟು ನಮಗೆ ಶಬ್ದ ಸಂಗ್ರಹವಿಲ್ಲ ಎಂದು ಹೇಳುತ್ತಿದ್ದಾರೆ. ಅದರ ಮೇಲೆ ಒಂದು ಕಮಿಟಿಯನ್ನು ಮಾಡಿದ್ದು ಅದರ ವರದಿ ಬಂದಿದೆ. ಯಾವ ಯಾವ ಶಬ್ದಗಳನ್ನು ಆಡಳಿತ ಭಾಷೆಯಾಗಿ ಕನ್ನಡವನ್ನು ಮಾಡಿದ ಪ್ರಯುಕ್ತ ಉಪಯೋಗಿಸಲು ಸಾಧ್ಯವಾಗುತ್ತದೆ ಎಂದು ೫-೪-೬೭ ರಲ್ಲಿ ವರದಿ ಬಂದಿದೆ. ಕೆಲವು ಶಬ್ದಗಳಿಗೆ ಪಾರಿಭಾಷಿಕ ಶಬ್ದಗಳು ಯಾವುದನ್ನು ಉಪಯೋಗಿಸಬೇಕು ಎಂದು ನೋಡಿ ಬಹುಮಟ್ಟಿಗೆ ಜಾರಿಗೆ ತರಬಹುದು.

ಶ್ರೀ ಎ.ಜೆ. ದೊಡ್ಡಮೇಟಿ - ಸಾಧ್ಯವಾದಷ್ಟು ತೀವ್ರವಾಗಿ ಕಾರ್ಯರೂಪಕ್ಕೆ ತರಲಾಗುವುದು ಎಂದು ಹೇಳಿದ್ದಾರೆ. ಶಾಸನ ಸಭೆಯಲ್ಲಿ ಮಂತ್ರಿಗಳು ಉತ್ತರ ಕೊಡುವುದು ಅಥವಾ ಇಲ್ಲಿ ಈ ಪತ್ರಗಳನ್ನು ಸಭೆಯ ಮುಂದೆ ಇಡುತ್ತೇವೆ ಎನ್ನುವುದು, ಇಷ್ಟನ್ನಾದರೂ ಹೇಳಲು ಕನ್ನಡವನ್ನು ಉಪಯೋಗಿಸುವುದಕ್ಕೆ ಏನು ತೊಂದರೆ ಇದೆ ?

ಶ್ರೀ ಎಸ್. ನಿಜಲಿಂಗಪ್ಪ - ಎಲ್ಲಾ ಮಂತ್ರಿಗಳೂ, ಎಲ್ಲಾ ಸದಸ್ಯರೂ, ಕನ್ನಡದಲ್ಲಿಯೇ ಮಾತನಾಡಿದರೆ ಸಂತೋಷ, ಎಲ್ಲರೂ ಒಪ್ಪತಕ್ಕ ಮಾತು, ಸುಸ್ವಾಗತ, ಆದರೆ ಎಲ್ಲವನ್ನೂ ಕನ್ನಡದಲ್ಲಿಯೇ ಮಾಡಬೇಕು ಎಂದರೆ ಬಹಳ ಕಷ್ಟವಾಗುತ್ತದೆ. ಕೆಲವು ಸದಸ್ಯರಿಗೆ ಕನ್ನಡ ಬರುವುದಿಲ್ಲ, ಕೆಲವು ಸದಸ್ಯರಿಗೆ ತಿಳಿಯುವುದಿಲ್ಲ. ಆದುದರಿಂದ ಕೆಲವು ಕಾಲದ ಮೇಲೆ ಹಾಗೆ ಮಾಡಬಹುದು ಎಂದು ಕಾಣುತ್ತದೆ. ಎಲ್ಲಿಯವರೆಗೆ ನಮ್ಮ ಶಬ್ದಸಂಗ್ರಹ ಸಾಕಷ್ಟು ಕನ್ನಡ ಭಾಷೆಯಲ್ಲಿ ಇಲ್ಲವೋ, ಅಲ್ಲಿಯವರೆಗೆ ಈ ಕಷ್ಟವಿರುತ್ತದೆ. ಆದಷ್ಟು ಜಾಗ್ರತೆ ಈ ಕಷ್ಟ ತೊಲಗಲಿ ಎಂದು ಹಾರೈಸುತ್ತೇನೆ.

ವಿಧಾನ ಸಭೆ ನಡವಳಿಕೆ: ದಿ. 29-6-67 ಪುಟ 192-193

## ಕೃಷ್ಣಾ-ಗೋದಾವರಿ ನೀರು ಹಂಚಿಕೆ ಮೇಲಿನ ಚರ್ಚೆ

## 1ನೇ ಏಪ್ರಿಲ್ 1963

ಮಾನ್ಯರೇ, ಈ ವಿಷಯವನ್ನು ಚರ್ಚೆಗೆ ತೆಗೆದುಕೊಳ್ಳುವ ಮುನ್ನ ನಾನು ಕೆಲವು ಅಂಶಗಳನ್ನು ತಿಳಿಸಲಿಚ್ಛಿಸುತ್ತೇನೆ. ಈ ಹೇಳಿಕೆಯು ಸಂಬಂಧಿತ ಕೇಂದ್ರ ಮಂತ್ರಿಗಳು ೨೩ ನೇ ಮಾರ್ಚ್‌ನಲ್ಲಿ ನೀಡಿದ್ದರು. ಆ ಹೇಳಿಕೆಯು ಪ್ರತಿಗಳ ಜೊತೆ ಕೃಷ್ಣಾ - ಗೋದಾವರಿ ನೀರನ್ನು ಹಂಚಿಕೊಳ್ಳುವ ವಿಷಯವಾಗಿ ಗುಲಾಟಿ ಸಮಿತಿಯ ಶಿಫಾರಸುಗಳ ಸಾರಾಂಶವನ್ನು ಹಂಚಿದ್ದೇನೆ.

ಈ ವಿಷಯವು ಮೂರು ರಾಜ್ಯಗಳ ಮನಸ್ಸಿನಲ್ಲಿ ಉದ್ವೇಗ ಉಂಟುಮಾಡಿದೆ. ಇನ್ನೆರಡು ರಾಜ್ಯಗಳು ಒರಿಸ್ಸಾ ಮತ್ತು ಮಧ್ಯಪ್ರದೇಶ ಕೂಡಾ ಭಾಗಿಯಾಗಿದ್ದರೂ ಅವರಿಂದ ಹೆಚ್ಚಿಗೆ ಏನೂ ಕೇಳಿ ಬರುತ್ತಿಲ್ಲ, ಆದರೆ ಈ ವಿಷಯ ನದಿಗಳು ಉಗಮವಾಗುವ ಮಹಾರಾಷ್ಟ್ರ, ಹರಿಯುವ ಕರ್ನಾಟಕ ಮತ್ತು ಸಮುದ್ರಕ್ಕೆ ಸೇರುವ ಆಂಧ್ರ ಪ್ರದೇಶಗಳಲ್ಲಿ ಭಾರಿ ಚಳುವಳಿಗೆ ಎಡೆಮಾಡಿದೆ ಮತ್ತು ಮೂರು ರಾಜ್ಯಗಳಲ್ಲೂ ನಾನಾ ಅಭಿಪ್ರಾಯಗಳಿಗೆ ದಾರಿ ಮಾಡಿದೆ. ಮೂರು ರಾಜ್ಯಗಳ ಶಾಸಕಾಂಗವು ಮಂತ್ರಿಗಳ ಹೇಳಿಕೆಯನ್ನು ಗಮನಿಸಿರುವುದು ಮತ್ತು ತಮ್ಮ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಿರುವುದನ್ನು ಗಮನಿಸಿದರೆ, ಈ ಸಮಸ್ಯೆಯು ಎಷ್ಟು ಜಟಿಲ ಎಂಬುದು ಅರಿವಾಗುತ್ತದೆ. ಈ ಸದನವು ಎರಡು ದಿನಗಳ ಕಲಾಪವನ್ನು ರದ್ದುಗೊಳಿಸಿ ಈ ವಿಷಯವನ್ನು ಚರ್ಚಿಸಲು ಕುಳಿತಿದೆ ಎಂದರೆ ಇದು ಈ ಸಮಸ್ಯೆಯ ಪ್ರಾಮುಖ್ಯತೆ ಮತ್ತು ತೀವ್ರತೆಯನ್ನು ಸೂಚಿಸುತ್ತದೆ. ಆದ್ದರಿಂದ ಮಾನ್ಯರೇ, ಸದಸ್ಯರು ಈ ಪ್ರಮುಖ ವಿಷಯದ ಬಗ್ಗೆ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತೀರೆಂದು ಆಶಿಸುತ್ತೇನೆ.

ಮೈಸೂರು ಸರ್ಕಾರವು ಮುಂದಿಟ್ಟಿರುವ ವಾದವನ್ನು ಮತ್ತು ಒತ್ತಿ ಹೇಳಿರುವ ತತ್ವಗಳನ್ನು ಎಲ್ಲರೂ ಒಪ್ಪಿಕೊಂಡಿದ್ದಾರೆ, ಮೊದಲನೆಯದಾಗಿ, ಆಂಧ್ರ ಪ್ರದೇಶವು ೧೯೫೧ ರ ಒಪ್ಪಂದದ ಮೇಲೆ ಭಾರೀ ಒತ್ತು ನೀಡಿತು, ಅದೊಂದು ಒಪ್ಪಂದವೇ ಅಲ್ಲವೆಂಬುದು ನಮ್ಮ ವಾದ. ಆ ಕಾರಣಕ್ಕಾಗಿ ಮೈಸೂರಿನಿಂದ ಯಾವ ಪ್ರತಿನಿಧಿಯೂ ಅದಕ್ಕೆ ಸಹಿ ಹಾಕಿಲ್ಲ. ಆದ ಕಾರಣ ಅದನ್ನು ಕಡ್ಡಾಯವಾಗಿ ಒಪ್ಪುವ ಕರಾರು ನಮಗಿಲ್ಲ. ಇದರ ಬಗ್ಗೆ ಮಹಾರಾಷ್ಟ್ರೀಯನ್ನರು ಕೂಡ ಸಂತಸ ವ್ಯಕ್ತಪಡಿಸಿಲ್ಲ. ಇದನ್ನು ಒಪ್ಪಿಕೊಂಡು ಕಾರ್ಯರೂಪಕ್ಕೆ ತರಬೇಕೆಂದು ಆಂಧ್ರ ಪ್ರದೇಶ ಸರ್ಕಾರ ಒತ್ತಾಯಿಸುತ್ತಿದ್ದರೂ, ಇದು ನಮ್ಮ ಮೇಲೆ ಯಾವುದೇ ರೀತಿಯ ಕರಾರಲ್ಲವೆಂದು ನಾವು ವಾದಿಸುತ್ತಿದ್ದೇವೆ.

---

ವಿಧಾನ ಸಭೆ ನಡವಳಿಕೆ: ದಿ. 1-4-63 ಪುಟ 2192-2199

ಪಶ್ಚಿಮ ಮುಖವಾಗಿ ಹರಿಯುವ ನದಿಗಳ ದಿಕ್ಕಿನ ಬಗ್ಗೆ ಯಾವುದೇ ಹಸ್ತಕ್ಷೇಪ ಮಾಡಬಾರದೆಂದು ಕೇಂದ್ರ ಸರ್ಕಾರವು ಬಹಳ ಸರಿಯಾಗಿ ತೀರ್ಮಾನ ನೀಡಿದೆ. ನಾನು ಈ ಅಂಶಕ್ಕೆ ಒತ್ತು ನೀಡುತ್ತೇನೆ, ಏಕೆಂದರೆ ಹರಿಯುವ ಯಾವುದೇ ನದಿಯು ಸ್ವಾಭಾವಿಕವಾಗಿ ಹರಿಯುವ ದಿಕ್ಕಿನ ಬಗ್ಗೆ ಹಸ್ತಕ್ಷೇಪ ಮಾಡಬಾರದು. ಮಹಾರಾಷ್ಟ್ರಕ್ಕೆ ವಿದ್ಯುತ್ತಿನ ಅವಶ್ಯಕತೆ ಇರಬಹುದು, ಅದರ ಬಗ್ಗೆ ನನ್ನ ಸಹಾನುಭೂತಿಯೂ ಅವರೊಡನಿದೆ. ಆದರೆ, ಆ ಕಾರಣಕ್ಕಾಗಿ ಇತರ ರಾಜ್ಯಗಳ ಹಕ್ಕುಗಳಿಗೂ ತೊಂದರೆ ಮಾಡುವುದರಲ್ಲಿ ಅರ್ಥವಿಲ್ಲ, ವಿದ್ಯುತ್ತನ್ನು ಬೇಕಾದರೆ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಗ್ರಿಡ್ ವ್ಯವಸ್ಥೆಯ ಮೂಲಕ ಹರಿಯ ಬಿಡಬಹುದು. ಆದರೆ ಹರಿಯುವ ನೀರು ಇಳಿಮುಖವಾಗಿಯೇ ಹಾಯಬೇಕು, ನಾನು ಮತ್ತೆ ಒತ್ತಿ ಹೇಳುವುದೇನೆಂದರೆ, ಎಲ್ಲರೂ ಒಪ್ಪಿಕೊಂಡಿರುವ ನದಿಗಳ ಸ್ವಾಭಾವಿಕ ದಿಕ್ಕಿನ ಬಗ್ಗೆ ಯಾವುದೇ ಹಸ್ತಕ್ಷೇಪ ಮಾಡಬಾರದು. ಈಗ ಕೇಂದ್ರ ಸರ್ಕಾರವು ಕೃಷ್ಣಾ ಮೇಲ್ದಂಡೆ ಯೋಜನೆ ಮತ್ತು ಮಲಪ್ರಭಾ ಯೋಜನೆಗಳಿಗೆ ಅನುಮತಿ ನೀಡಿರುವುದು ನಾವೆಲ್ಲರೂ ತೃಪ್ತಿಪಡಬೇಕಾದ ವಿಷಯವಾಗಿದೆ ಮತ್ತು ಕೇಂದ್ರ ಮಂತ್ರಿಗಳ ಹೇಳಿಕೆಯಲ್ಲಿ ನಮ್ಮ ದೃಷ್ಟಿಕೋನವನ್ನು ಒಪ್ಪಿಕೊಂಡಿರುವುದು ಸ್ಪಷ್ಟವಾಗಿದೆ. ಮೈಸೂರಿನ ಹಲವು ಭಾಗಗಳಲ್ಲಿ ಪ್ರತ್ಯೇಕವಾಗಿ ಬಿಜಾಪುರ ಮತ್ತು ಸುತ್ತಲಿನ ಪ್ರದೇಶಗಳಲ್ಲಿ, ಅಭಾವದ ಪರಿಸ್ಥಿತಿ ಒದಗಿರುವುದರಿಂದ ಕೃಷ್ಣಾ ಮೇಲ್ದಂಡೆ ಮತ್ತು ಮಲಪ್ರಭಾ ಯೋಜನೆಗಳು ಕೂಡಲೇ ಕಾರ್ಯಗತವಾಗಬೇಕು ಎಂಬುದನ್ನು ನಾವು ಒತ್ತಾಯಿಸುತ್ತೇವೆ. ಯಾವ ರೀತಿ ಆಂಧ್ರ ಪ್ರದೇಶವು ಶ್ರೀಶೈಲಂ ಮತ್ತು ನಾಗಾರ್ಜುನ ಸಾಗರ ಯೋಜನೆಗಳು ಕೈಗೊಂಡಂತೆ ನಾವು ಕೃಷ್ಣ ಮೇಲ್ದಂಡೆ ಮತ್ತು ಮಲಪ್ರಭಾ ಯೋಜನೆಗಳನ್ನು ಕೈಗೊಳ್ಳುತ್ತೇವೆ. ಮೈಸೂರು ರಾಜ್ಯದ ನಿಲುವು ಸರಿಯಾಗಿದ್ದರಿಂದ ಅವರು ನಮಗೆ ಮಲಪ್ರಭಾ ಮತ್ತು ಕೃಷ್ಣಾ ಮೇಲ್ದಂಡೆ ಯೋಜನೆಗಳನ್ನು ಕೈಗೆತ್ತಿಕೊಳ್ಳಲು ಅನುಮತಿ ನೀಡಿದ್ದಾರೆ. ಇದು ನಮಗೆ ಬಹಳ ತೃಪ್ತಿಯನ್ನು ತಂದಿದೆ, ಅವರು ಈ ಯೋಜನೆಗಳನ್ನು ಕೇವಲ ಮೊದಲ ಹಂತಕ್ಕೆ ಸೀಮಿತಗೊಳಿಸದೇ ಎರಡನೇ ಹಂತವನ್ನೂ ಕೈಗೆತ್ತಿಕೊಳ್ಳಲು ಅನುಮತಿ ನೀಡಿದ್ದು, ಮೊದಲನೇ ಹಂತಕ್ಕೂ ಎರಡನೇ ಹಂತಕ್ಕೂ ಯಾವುದೇ ವ್ಯತ್ಯಾಸ ಮಾಡಿಲ್ಲ. ಮೊದಲನೆಯ ಹಂತವನ್ನು ಬೇರ್ಪಡಿಸಿ ಎರಡನೇ ಹಂತವನ್ನು ಮುಂದುವರಿಸಲು ಸಾಧ್ಯವಿಲ್ಲ. ನಾವು ಇಡೀ ಯೋಜನೆಯ ರೂಪರೇಷೆಗಳನ್ನು ತಯಾರಿಸುತ್ತಿದ್ದೇವೆ. ಕೇಂದ್ರ ಸರ್ಕಾರವು ಯಾವುದೇ ರೀತಿಯ ಅಡಚಣೆ ಉಂಟು ಮಾಡುವುದಿಲ್ಲವೆಂಬ ನಂಬಿಕೆ ಇದೆ.

ನಾವು ಹೇಳಿರುವ ಮತ್ತೊಂದು ಅಂಶವೆಂದರೆ, ಅಭಾವ ಪೀಡಿತ ಪ್ರದೇಶಗಳಿಗೆ ಪ್ರಥಮ ಆದ್ಯತೆ ನೀಡಬೇಕು ಮತ್ತು ಭವಿಷ್ಯತ್ತಿನಲ್ಲಿ ವಿಂಗಡಣೆ ಮಾಡಲು ಜನಸಂಖ್ಯೆ, ಜಲಾನಯನ ಪ್ರದೇಶ, ಮಳೆಯ ಪ್ರಮಾಣ, ಮಣ್ಣಿನ ಗುಣ, ನೀರಾವರಿ ಮಾಡಬೇಕಾದ ಪ್ರದೇಶ ಮತ್ತು ಜನರ ಆರ್ಥಿಕ ಮಟ್ಟ ಇವೆಲ್ಲವನ್ನೂ ಮೂಲಮಾನವಾಗಿಟ್ಟುಕೊಳ್ಳಬೇಕು, ಎಲ್ಲ ಅಂಶಗಳನ್ನು ಪರಿಗಣಿಸಲಾಗಿದೆ ಎಂದು ಅವರು ಹೇಳಿದರೂ ತತ್ವಗಳ

ಸತ್ವಕ್ಕನುಸಾರವಾಗಿ ಅವರು ಒಪ್ಪಿದ್ದಾದರೆ, ಇದನ್ನು ಸಂಪೂರ್ಣವಾಗಿ ಒಪ್ಪಿಕೊಳ್ಳಲಾಗುವುದಿಲ್ಲ, ಅಭಾವ ಪೀಡಿತ ಪ್ರದೇಶಗಳಿಗೆ ಪ್ರಥಮ ಆದ್ಯತೆ ಎಂಬುದು ಮಾತ್ರ ಸ್ಪಷ್ಟ. ಅಭಾವ ಪೀಡಿತ ಪ್ರದೇಶಗಳ ಸಮಸ್ಯೆಯನ್ನು ಬಗೆಹರಿಸಲು ಮೈಸೂರು ಸರ್ಕಾರ ಮುಂದಿಟ್ಟಿರುವ ಪ್ರಸ್ತಾವಗಳನ್ನು ಪಕ್ಕಾ ರೀತಿಯಲ್ಲಿ ಅಂದಾಜು ವೆಚ್ಚ ಮಾಡಿ ಕೇಂದ್ರ ಸರ್ಕಾರಕ್ಕೆ ಮತ್ತು ಯೋಜನಾ ಆಯೋಗಕ್ಕೆ ಕಳುಹಿಸಿದ್ದಾದರೆ, ಅವರು ಅದನ್ನು ಸಹಾನುಭೂತಿಯಿಂದ ಪರಿಗಣಿಸುತ್ತಾರೆ.

ಕೆಲಸಗಳನ್ನು ಮಾಡಲು ಒಂದು ವಿಧಾನವಿದೆ, ನಮ್ಮ ಹಿತಾಸಕ್ತಿಗಳಿಗೆ ಧಕ್ಕೆ ಬಂದರೆ ಚಳುವಳಿ ಅವಶ್ಯಕವಾದರೆ ಅದಕ್ಕೆ ನಾವು ಹಿಂದೆ ಹೋಗುವುದಿಲ್ಲ. ಆದರೆ ಆ ವಿಷಯವನ್ನು ಚರ್ಚಿಸಲು ಇದು ಸಮಯವಲ್ಲ. ನಮಗೆ ನ್ಯಾಯಸಮ್ಮತ್ರವಾಗಿ ದೊರೆಯಬೇಕಾಗಿರುವ ನೀರನ್ನು ಪಡೆದುಕೊಳ್ಳುವುದು ಈಗ ನಾನಾ ಮಟ್ಟಗಳಲ್ಲಿ ಚಳುವಳಿಯ ವಿಷಯವಾಗಿದೆ. ನಾವು ಇಲ್ಲಿ ನಮ್ಮನ್ನು ವ್ಯಕ್ತಪಡಿಸಿಕೊಳ್ಳುತ್ತೇವೆ. ಶಾಸಕಾಂಗದಲ್ಲಿ ಮೈಸೂರಿನ ಸದಸ್ಯರು ಚಳುವಳಿ ಮಾಡುತ್ತಾರೆ, ಸರ್ಕಾರ ಚಳುವಳಿ ಮಾಡುತ್ತದೆ ಮತ್ತು ಖಂಡಿತವಾಗಿ ಪ್ರಜೆಗಳೂ ಚಳುವಳಿ ನಡೆಸುತ್ತಾರೆ. ಈ ವಿಷಯವೂ ನಮಗೆ ಬಹಳ ಮುಖ್ಯವಾದದ್ದಾಗಿದೆ. ಎಷ್ಟು ಪ್ರಮಾಣದಲ್ಲಿ ನೀರು ದೊರೆಯುತ್ತದೆ ಎಂಬುದರ ಬಗ್ಗೆ ನಿರ್ದಿಷ್ಟತೆ ಇಲ್ಲ.

ಕೃಷ್ಣಾ ಮತ್ತು ಅದರ ಉಪನದಿಗಳು ನೀರಾವರಿ ಒದಗಿಸುವ ಒಟ್ಟು ಪ್ರದೇಶ ಸುಮಾರು ಶೇಕಡಾ ೫ ಅಥವಾ ಇನ್ನೂ ಕಡಿಮೆ ಇರಬಹುದು. ವಿಜಾಪುರ ಮತ್ತು ಅದರ ಜೊತೆಗಿನ ಜಿಲ್ಲೆಗಳನ್ನು ಪರಿಗಣನೆಗೆ ತೆಗೆದುಕೊಂಡರೆ ನೀರಾವರಿಗೆ ಒಳಗಾಗುವ ಪ್ರದೇಶ ಕೇವಲ ಶೇಖಡಾ ಒಂದು, ಈ ವಿಷಯವನ್ನು ಕೇಂದ್ರ ಸರ್ಕಾರ ಮತ್ತು ಆಂಧ್ರ ಪ್ರದೇಶ ಇಬ್ಬರೂ ಪರಿಗಣಿಸಬೇಕು. ಮಿಗಿಲಾಗಿ ನಾವೆಲ್ಲರೂ ಬೇರೆ ಬೇರೆ ದೇಶಗಳಿಗೆ ಸೇರಿದವರಾಗಿರದೇ ಒಂದೇ ದೇಶಕ್ಕೆ ಸೇರಿದವರಾಗಿದ್ದೇವೆ. ಯಾರಿಗೆ ತೊಂದರೆಯಾದರೂ ಇಡೀ ದೇಶಕ್ಕೆ ತೊಂದರೆಯಾಗುತ್ತದೆ. ಈ ವಿಷಯವನ್ನು ಮನಸ್ಸಿನಲ್ಲಿಟ್ಟುಕೊಂಡು ಕೇಂದ್ರ ಸರ್ಕಾರ ಮತ್ತು ಇತರೆ ರಾಜ್ಯಗಳು ಈ ಸಮಸ್ಯೆಯನ್ನು ವಿಚಾರ ಮಾಡಬೇಕು. ಯಾವ ಜನರು ಅಭಾವ ಪೀಡಿತ ಪ್ರದೇಶಗಳಲ್ಲಿ ವಾಸಿಸುತ್ತಿದ್ದಾರೋ, ಯಾವ ಪ್ರದೇಶಗಳಲ್ಲಿ ಬೆಳೆ ಬೆಳೆಯಲು ಸ್ಥಳದ ಅಭಾವವಿದೆಯೋ ಅಂತಹ ಜನರಿಗೆ ಈ ನೀರಿನ ಉತ್ತಮ ಅನುಕೂಲ ಪಡೆದುಕೊಳ್ಳುವಂತೆ ಮಾಡಬೇಕು. ಆಂಧ್ರ ಪ್ರದೇಶವು ಶ್ರೀಮಂತ ಪ್ರದೇಶವಾಗಿದ್ದು ಉತ್ತಮ ಮಳೆಯೂ ಆಗುತ್ತದೆ. ಅಲ್ಲಿ ಸಾಗುವಳಿ ಶೇಕಡಾ ಸುಮಾರು ೨೬%, ಅವರಿಗೆ ನಾಗಾರ್ಜುನ ಸಾಗರ ಯೋಜನೆ ಜಾರಿಗೆ ಬಂದರೆ, ಅವರ ನೀರಾವರಿ ಪ್ರದೇಶ ಶೇಕಡಾ ೪೦ ಕ್ಕೂ ಹೆಚ್ಚುತ್ತದೆ. ಈ ಎಲ್ಲ ಅಂಶಗಳನ್ನೂ ಆ ದೃಷ್ಟಿಕೋನದಿಂದ ಗಮನಿಸಬೇಕಾಗಿದೆ ಈ ವಿಷಯಗಳನ್ನು ನಾವು ಪರಿಗಣಿಸಬೇಕಾಗಿದೆ. ನಾನು ನ್ಯಾಯಾಲಯದ ಮೊರೆ ಹೊಕ್ಕುತ್ತಿಲ್ಲ, ಇದನ್ನು ಮಾತುಕತೆಯ ಮೂಲಕ ಇತ್ಯರ್ಥ ಮಾಡಿಕೊಳ್ಳಬಹುದೆಂಬುದನ್ನು ಈಗಾಗಲೇ

ಉಲ್ಲೇಖಿಸಿದ್ದೇನೆ. ಆದರೆ ಅವೆಲ್ಲ ಮಾಡಲು ಇದು ಸರಿಯಾದ ಸಮಯವಲ್ಲವೆಂದು ನನಗನಿಸುತ್ತದೆ.

ನಮಗೆ ಹೆಚ್ಚು ನೀರು ಬೇಕೆಂದು ಕೇಳುತ್ತಿದ್ದೇವೆ, ಅದು ಸರಿಯಾಗಿದೆ. ಆದರೆ, ನಮಗೆ ಹೆಚ್ಚು ನೀರು ಬಂದಾಗ ನಾವು ಎಷ್ಟು ಸಿದ್ಧರಾಗಿದ್ದೀವಿ ? ಕೃಷ್ಣಾ, ಗೋದಾವರಿ ಅಥವಾ ಕಾವೇರಿ ಪ್ರದೇಶದಲ್ಲಿ ನಾವೇನೂ ಹೆಚ್ಚಿಗೆ ಮಾಡಿಲ್ಲ. ತುಂಗಭದ್ರಾ ಮತ್ತು ಘಟಪ್ರಭಾದ ಒಂದು ಭಾಗ ಮತ್ತು ಈಗ ಕೈಗೆತ್ತಿಕೊಂಡಿರುವ ಕಬಿನಿ ಜಲಾಶಯವನ್ನು ಬಿಟ್ಟರೆ ಕಾವೇರಿ ಕಣಿವೆ ಪ್ರದೇಶದಲ್ಲಿ ನಾವೇನನ್ನು ಮಾಡಿಲ್ಲ. ಇವನ್ನು ಕಾರ್ಯರೂಪಗೊಳಿಸಲು ಅವಶ್ಯಕವಾಗಿರುವ ಸಂಪನ್ಮೂಲಗಳನ್ನೂ ಸರಿಹೊಂದಿಸುವಲ್ಲಿ ನಾವೀಗಾಗಲೇ ತಡಮಾಡಿದ್ದೇವೆ. ನನ್ನ ಸಹೋದ್ಯೋಗಿಗಳೊಂದಿಗೆ ನಾನು ಈ ನಿರ್ಧಾರಕ್ಕೆ ಬಂದಿದ್ದೇನೆ. ಏನೇ ಬರಲಿ ನಾವು ಆರಂಭ ಮಾಡಲೇಬೇಕು ಮತ್ತು ಹಣವನ್ನೂ ಹೇಗಾದರೂ ಸಿದ್ಧಮಾಡಬೇಕು, ಹಣವನ್ನು ಹೇಗಾದರೂ ಸಿದ್ದಮಾಡುವುದು ಬಹಳ ಮಟ್ಟಿಗೆ ನಿಮ್ಮ ಸಹಕಾರದ ಮೇಲೆ ಆಧಾರಪಟ್ಟಿದೆ. ಈ ಉದ್ಯಮವು ಈ ರಾಜ್ಯ ಆ ರಾಜ್ಯಕ್ಕೆ ಸೇರಿರದೇ ನಮ್ಮೆಲ್ಲರಿಗೂ ಸೇರಿದ್ದಾಗಿದೆ ಆದ್ದರಿಂದ ಇಲ್ಲಿರುವ ಪ್ರತಿ ಸದಸ್ಯರಿಗೂ ತಮ್ಮ ಶಕ್ತ್ಯಾನುಸಾರ ಪ್ರಯತ್ನ ಮಾಡಿ ಹಣಕಾಸಿನ ವ್ಯವಸ್ಥೆ ಮಾಡುವಂತೆ ಮನವಿ ಮಾಡಿಕೊಳ್ಳುತ್ತೇನೆ.

# ಗಡಿವಿವಾದದ ಚರ್ಚೆ

## 26ನೇ ಜುಲೈ 1966

ಮಾನ್ಯ ಸಭಾಪತಿಗಳೆ, ಕಳೆದ ನಾಲ್ಕು ದಿನಗಳಿಂದ ಮೈಸೂರು ಮತ್ತು ಮಹಾರಾಷ್ಟ್ರ ಹಾಗೂ ಕೇರಳ ಮತ್ತು ಮೈಸೂರಿನ ನಡುವಿನ ಗಡಿ ಪ್ರಶ್ನೆಯ ಬಗ್ಗೆ ಚರ್ಚೆ ನಡೆದಿದೆ. ಮಹಾರಾಷ್ಟ್ರ ಮತ್ತು ಮೈಸೂರು ಹಾಗೂ ಕೇರಳ ಮತ್ತು ಮೈಸೂರಿನ ನಡುವಿನ ವಿವಾದವನ್ನು ಭಾರತ ರಾಷ್ಟ್ರೀಯ ಕಾಂಗ್ರೆಸ್ ಕಾರ್ಯಕಾರಿ ಸಮಿತಿಯು ತೀರ್ಮಾನಿಸಿದಂತೆ ಕೇಂದ್ರ ಸರ್ಕಾರದಿಂದ ರಚಿಸಲ್ಪಟ್ಟ ಒಂಟಿ ಸಮಿತಿಗೆ ಶಿಫಾರಸ್ಸು ಮಾಡಬೇಕೆಂಬ ತೀರ್ಮಾನದಿಂದ ಪ್ರಾಮುಖ್ಯತೆ ಪಡೆದ ವಿಷಯವಲ್ಲ. ಇದು ಭಾರತ ಸರ್ಕಾರಕ್ಕೆ ಕಾರ್ಯಕಾರಿ ಸಮಿತಿ ನೀಡಿದ ಶಿಫಾರಸ್ಸು. ಭಾರತ ರಾಷ್ಟ್ರೀಯ ಕಾಂಗ್ರೆಸ್ಸಿನ ಕಾರ್ಯಕಾರಿ ಸಮಿತಿಯು ಪ್ರಮುಖ ಅಂಗವಾಗಿದ್ದು, ಅದರ ತೀರ್ಮಾನಗಳು ತೂಕ ಹೊಂದಿದ್ದು ಭಾರಿ ಪರಿಣಾಮವನ್ನು ಬೀರುತ್ತವೆ. ಈ ನಿರ್ಣಯಕ್ಕೆ ನಾನೂ ಭಾಗಿ ಎಂದು ನನ್ನ ಮಿತ್ರರು ಇದನ್ನೊಂದು ದೊಡ್ಡ ವಿಷಯ ಮಾಡಿದ್ದಾರೆ. ವಾಸ್ತವದಲ್ಲಿ ನಾನು ಈ ತೀರ್ಮಾನವನ್ನು ವಿರೋಧಿಸಿ ಇದು ಸಮಯೋಚಿತ ತೀರ್ಮಾನವಲ್ಲವೆಂದು ಕಾರ್ಯಕಾರಿ ಸಮಿತಿಗೆ ಸೂಚಿಸಿದ್ದೇನೆ. ಕೇವಲ ಮೂರು ರಾಜ್ಯಗಳಿಗೆ ಅಲ್ಲದೇ ದೇಶವಿಡೀ ಇದರ ಪರಿಣಾಮ ಬೀರುವುದರಿಂದ ಗಡಿ ವಿಷಯವನ್ನು ಈಗ ಕೈಗೆತ್ತಿಕೊಳ್ಳುವುದು ಸೂಕ್ತವಲ್ಲವೆಂದು ಮತ್ತು ಸುಮಾರು ಹತ್ತು ವರ್ಷಗಳಿಂದ ಬೆಳೆದು ಬಂದಿರುವ ಈ ಸಮಸ್ಯೆಯನ್ನು ಮತ್ತೆ ತೆಗೆಯುವುದು ಬೇಡವೆಂದು ಹೇಳಿದ್ದೇನೆ, ಆದರೆ ಘಟನೆಗಳು ನಡೆದು ಹೋದವು. ಸಭೆಯನ್ನು ವಿಶ್ವಾಸಕ್ಕೆ ತೆಗೆದುಕೊಂಡು ಹೇಳುವುದಾದರೆ, ಕಾರ್ಯಕಾರಿ ಸಮಿತಿಯಲ್ಲಿ ಕಾರ್ಯಕಾರಿ ಸಮಿತಿಯ ಏಕಾಭಿಪ್ರಾಯ ಪರಿಗಣಿಸಿ ತೀರ್ಮಾನಗಳನ್ನು ದಾಖಲು ಮಾಡಲಾಯಿತು. ನಾನಿದಕ್ಕೆ ಸ್ವಇಚ್ಛೆಯಿಂದ ಒಪ್ಪಿದ್ದೇನೆ ಎಂದರೆ ತಪ್ಪಾಗುತ್ತದೆ. ಕಾರ್ಯಕಾರಿ ಸಮಿತಿಗೆ ಇದರ ಪರಿಣಾಮಗಳ ಬಗ್ಗೆ ಎತ್ತಿ ತೋರಿಸಿದೆ. ಆದರೆ ತೀರ್ಮಾನಗಳನ್ನು ಅಸ್ಪಷ್ಟ ಮತ್ತು ಅನಿರ್ದಿಷ್ಟ ರೀತಿಯಲ್ಲಿ ಯಾವುದೇ ಗುರಿಯಿಲ್ಲದೇ ಮಾಡಲಾಗಿದೆ, ಇದು ಹೀಗೆ ಕಳೆದುಬಿಡುತ್ತದೆ ಎಂದು ಭಾವಿಸಿದೆ.

ಆದರೆ, ಏಕ ವ್ಯಕ್ತಿ ಆಯೋಗವನ್ನು ನೇಮಕ ಮಾಡಲು ಶಿಫಾರಸ್ಸು ಮಾಡುವ ತೀರ್ಮಾನವನ್ನು ಮಾಡಲಾಯಿತು. ಮೈಸೂರು ರಾಜ್ಯದ ಅಧೀನದಲ್ಲಿರುವ ವಿಸ್ತಾರ ಪ್ರಾಂತ್ಯಗಳನ್ನು ಮಹಾರಾಷ್ಟ್ರಕ್ಕೆ ಸೇರಿಸುವ ಪರವಾಗಿ ನಡೆಯುತ್ತಿರುವ ಚಳುವಳಿಗಳು ಬಹಳ ಮಟ್ಟಿಗೆ ಮೈಸೂರು ರಾಜ್ಯದ ಒಳಗಲ್ಲದೇ ಹೊರಗೆ ನಡೆಯುತ್ತಿವೆ ಎಂದು ವಿಷಯವನ್ನು ಈ ಸಮಯದಲ್ಲೂ ಹೇಳಲು ಇಚ್ಛಿಸುತ್ತೇನೆ. ಹೆಚ್ಚು ಪ್ರಾಮುಖ್ಯತೆ ಪಡೆಯುತ್ತಿರುವ ಈ ಚಳುವಳಿಯು ರಾಜ್ಯದ ಒಳಗಿನ ಜನರ ಚಳುವಳಿಯಾದರೆ, ಆದರೆ, ಹೊರಗಿನವರು ಮತ್ತು ಅವರು ಈ ಚಳುವಳಿಯನ್ನು ಏಕೆ ನಡೆಸುತ್ತಿದ್ದಾರೆಂಬುದು ನನಗೆ ಗೊತ್ತಿಲ್ಲ ಎಂದು ಹೇಳಲಿಚ್ಛಿಸುತ್ತೇನೆ.

---

ವಿಧಾನ ಸಭೆ ನಡವಳಿಕೆ: ದಿ. 26-7-66 ಪುಟ 471-493

ಮಹಾರಾಷ್ಟ್ರ ಏನು ಹೇಳಿದರೂ ಅದನ್ನು ಕಾರ್ಯಕಾರಿ ಸಮಿತಿ ಅಥವಾ ಭಾರತ ಸರ್ಕಾರ ಮಾಡುತ್ತದೆ ಎಂಬ ಭಾವನೆ ನಮ್ಮ ಮಿತ್ರರಲ್ಲಿ ಹೆಚ್ಚುತ್ತಿದೆ, ಅವರ ನಂಬಿಕೆ ಏನೇ ಇದ್ದರೂ, ರಾಜ್ಯದ ಬಹುತೇಕ ಜನರಲ್ಲಿ ಮೂಡುತ್ತಿರುವ ಸಂಶಯವೆಂದರೆ, ಕೇಂದ್ರ ಸರಕಾರ ಅಥವಾ ಕಾರ್ಯಕಾರಿ ಸಮಿತಿ ಮಹಾರಾಷ್ಟ್ರದ ಒತ್ತಡಕ್ಕೆ ಮಣಿಯುತ್ತದೆ ಎಂಬುದಾಗಿದೆ. ನಾವಿದನ್ನು ಸಂಪೂರ್ಣವಾಗಿ ಒಪ್ಪುವುದಿಲ್ಲವಾದರೂ ವಾಸ್ತವವಾಗಿ ಇದರ ಪರಿಣಾಮವಾಗಿ ಎಲ್ಲೆಡೆ ಜನರು ಇದರ ವಿರುದ್ಧ ಪ್ರತಿಭಟಿಸುತ್ತಿದ್ದಾರೆ.

ಈ ಮಂಡನೆಯು ಕಾರ್ಯಕಾರಿ ಸಮಿತಿಯ ಮುಂದೆ ಬಂದಾಗ, ನಿರ್ದೇಶನಾ ನಿಯಮಾವಳಿಯ ಬಗ್ಗೆ ನಿರ್ಣಯ ತೆಗೆದುಕೊಳ್ಳುವವರೆಗೂ ಅಥವಾ ಅದು ತಿಳಿಯುವವರೆಗೂ ಏಕ ವ್ಯಕ್ತಿ, (ತ್ರಿ ಸದಸ್ಯ ಅಥವಾ ಆಯೋಗ)ಯಾವುದೇ ಆಯೋಗವನ್ನು ನೇಮಕ ಮಾಡುವುದು ಸರಿಯಲ್ಲವೆಂಬ ನನ್ನ ನಿಲುವನ್ನು ನನ್ನ ಮಿತ್ರರು ಒಪ್ಪಿಕೊಂಡಿದ್ದಾರೆ ಮತ್ತು ಶ್ಲಾಘಿಸಿದ್ದಾರೆ. ೨೩ ನೇ ಮೇ, ೧೯೬೬ ರ ಬಾಂಬೆ ಕಾಂಗ್ರೆಸ್ ಅಧಿವೇಶನದ ನಿರ್ಧಾರದಲ್ಲಿ ಲೋಪವಿತ್ತು, ಈ ವಿಷಯವನ್ನು ಗುರುತಿಸಿ ಮಹಾರಾಷ್ಟ್ರ ಮತ್ತು ಮೈಸೂರು ರಾಜ್ಯಗಳ ಮುಖ್ಯಮಂತ್ರಿಗಳಿಗೆ ನಿರ್ದೇಶನಾ ನಿಯಮಾವಳಿಯ ಬಗ್ಗೆ ತೀರ್ಮಾನ ಮಾಡುವಂತೆ ಮತ್ತು ಸಾಧ್ಯವಾದಲ್ಲಿ ಆ ವಿಷಯವಾಗಿ ಒಂದು ಒಪ್ಪಂದಕ್ಕೆ ಬರುವಂತೆ ಸೂಚಿಸಲಾಯಿತು.

ಉಭಯ ಪಕ್ಷಗಳಿಗೂ ಒಪ್ಪುವಂತಹ ನಿಯಮಗಳನ್ನು ರೂಪಿಸಲು ಸರ್ವಪ್ರಯತ್ನ ಮಾಡುತ್ತೇನೆಂದು ಈ ಸಭೆಗೆ ಮತ್ತು ನನ್ನ ರಾಜ್ಯದ ಜನತೆಗೆ ಆಶ್ವಾಸನೆ ನೀಡುತ್ತೇನೆ. ಇಷ್ಟು ಮಾಡಿದ ನಂತರವೂ ಹಲವು ಜನರು ನನ್ನ ಕಡೆ ರಾಜಕೀಯ ಸನ್ನೆ ಮಾಡಿ ನನ್ನ ವಿರುದ್ಧ ಮಾತನಾಡುತ್ತಿದ್ದಾರೆ, ನಾನಿದರ ಬಗ್ಗೆ ಹೆಚ್ಚಾಗಿ ಗಮನ ಹರಿಸಲಿಚ್ಛಿಸುವುದಿಲ್ಲವಾದರೂ, ನಾನು ರಾಜ್ಯದ ಹಿತಾಸಕ್ತಿಗೆ ಧಕ್ಕೆ ಬರುವ ಯಾವುದೇ ಕೆಲಸ ಮಾಡಿಲ್ಲವೆಂದು ಸಭೆಗೆ ಆಶ್ವಾಸನೆ ನೀಡುತ್ತೇನೆ. ನನಗೆ ಮೈಸೂರಿನ ಬಗ್ಗೆ ಎಷ್ಟು ಆಸಕ್ತಿ ಇದೆಯೋ ಅಷ್ಟೇ ಆಸಕ್ತಿ ಮಹಾರಾಷ್ಟ್ರದ ಬಗ್ಗೆಯೂ ಇದೆ, ಏಕೆಂದರೆ ನಾವೆಲ್ಲರೂ ಒಂದೇ ದೇಶಕ್ಕೆ ಸೇರಿದವರು. ಮಹಾರಾಷ್ಟ್ರದಲ್ಲಿ ಈ ಚಳುವಳಿ ನಡೆಯುತ್ತಿರುವ ರೀತಿ ನನಗೆ ಸ್ವಲ್ಪವೂ ಒಪ್ಪುವುದಿಲ್ಲ. ಈ ಚಳುವಳಿಯಲ್ಲಿ ಸಾಮಾನ್ಯ ಪ್ರಜೆಗಳಲ್ಲಿ ಯಾವುದೇ ಆಸಕ್ತಿ ಇಲ್ಲ, ಇದರ ಹಾಗೆ ಹಲವು ವ್ಯಕ್ತಿಗಳು ಭಾವನಾತ್ಮಕವಾಗಿ ಉಪಯೋಗಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾರೆ.

ಈ ಸದನದಲ್ಲಿ ನಾನು ಹಿಂದೆ ಹೇಳಿದ್ದು ಹಲವು ಹೇಳಿಕೆಗಳನ್ನು ಮತ್ತೆ ಹೇಳಲು ಇಚ್ಛಿಸುತ್ತೇನೆ. ಗಡಿ ಪ್ರಶ್ನೆಯನ್ನು ಹಲವು ನಿರ್ಧಾರಿತ ಒಪ್ಪಿರುವ ತತ್ವಗಳಿಗನುಗುಣವಾಗಿ ತೀರ್ಮಾನ ಮಾಡಬೇಕಾಗಿದೆ. ಧರ್ ಆಯೋಗ, ರಾಜ್ಯ ಪುನರ್ ವಿಂಗಡಣಾ ಆಯೋಗ ಮತ್ತು ಹಲವು ಆಯೋಗಗಳು ಇದ್ದವು. ಅವೆಲ್ಲವೂ ಗಡಿಯನ್ನು ಯಾವ ಆಧಾರದ ಮೇಲೆ

ನಿರ್ಧರಿಸಬೇಕೆಂಬ ವಿಷಯವಾಗಿ ನಿರ್ದೇಶನಗಳ ನಿಯಮಾವಳಿಗಳನ್ನು ನೀಡಿವೆ. ಈ ವಿಷಯಗಳಲ್ಲಿ ಭಾಷೆಗೆ ಪ್ರಾಮುಖ್ಯತೆ ನೀಡಬೇಕೆಂದು ಅವರು ಅಭಿಪ್ರಾಯ ಪಟ್ಟರೂ ಭೌಗೋಳಿಕ ಸಾಮಿಪ್ಯ, ಆರ್ಥಿಕ ಅಭಿವೃದ್ಧಿ, ಸಾರಿಗೆ ಸೌಲಭ್ಯ, ಆಡಳಿತಾತ್ಮಕ ಅನುಕೂಲಗಳು ಮತ್ತಿತರ ಅಂಶಗಳು ಕೂಡಾ ಸಮಾನ ಪ್ರಾಮುಖ್ಯತೆ ಪಡೆಯುತ್ತವೆ. ಇವು ಒಪ್ಪಿರುವ ತತ್ವಗಳು ಇವನ್ನು ಹೊಸ ರಾಜ್ಯಗಳ ಉಗಮಕ್ಕೆ ಮೂಲವಾದ ರಾಜ್ಯ ಪುನರ್ ವಿಂಗಡಣಾ ಆಯೋಗದ ವರದಿಯಲ್ಲಿ ಸುದೀರ್ಘವಾಗಿ ವಿವರಿಸಲಾಗಿದೆ.

ಮರಾಠಿ ಭಾಷೆಯ ಜನ ಮೈಸೂರು ರಾಜ್ಯದಲ್ಲಿ ಅಥವಾ ಕನ್ನಡ ಭಾಷೆಯ ಜನರು ಮಹಾರಾಷ್ಟ್ರದಲ್ಲಿ ಕೆಲವರು ಉಳಿಯದಂತೆ ಗಡಿಗಳನ್ನು ತೀರ್ಮಾನಿಸುವುದು ಯಾವುದೇ ಮಾನವ ಯತ್ನದಿಂದ ಸಾಧ್ಯವೇ? ಇದನ್ನು ಮಾಡಲು ಸಾಧ್ಯವಿಲ್ಲ. ಇದು ಅಸಾಧ್ಯವೂ ಹೌದು ಮತ್ತು ಒಂದು ವೇಳೆ ಈ ರೀತಿ ಆಗುವುದಾದರೆ ಅದು ಒಳ್ಳೆಯದೂ ಅಲ್ಲ, ಏಕೆಂದರೆ, ಸುಮಾರು ೧೫-೨೦ ಮೈಲಿಯ ಸುತ್ತ ಪ್ರದೇಶದಲ್ಲಿ ಜನರು ಎರಡೂ ಭಾಷೆಗಳನ್ನು ಅರ್ಥಮಾಡಿಕೊಳ್ಳುತ್ತಾರೆ. ಇದರ ಬಗ್ಗೆ ಯಾವುದೇ ತೊಂದರೆ ಇಲ್ಲ. ಇವೆಲ್ಲ ವಿಷಯಗಳನ್ನೂ ಈಗ ಏಕೆ ಕೆದಕಬೇಕು, ನಾನು ತಿಳಿದುಕೊಳ್ಳಬೇಕು, ನಮಗೆ ಭಾಷಾವಾರು ರಾಜ್ಯಗಳು ಬೇಕಿತ್ತು, ನಾವದನ್ನು ಪಡೆದಿದ್ದೇವೆ ಮತ್ತು ತೃಪ್ತಿಕರವಾಗಿ ನಡೆಸುಕೊಂಡು ಹೋಗುತ್ತಿದ್ದೇವೆ. ಸಾಕಷ್ಟು ಅಭಿವೃದ್ಧಿ ಎಲ್ಲೆಡೆ ಕಂಡುಬರುತ್ತಿರುವಾಗ ಯಾವುದೇ ಒಂದು ರಾಜ್ಯದ ಶಾಸಕಾಂಗದಿಂದಲ್ಲದೇ ಇಡೀ ಭಾರತದ ಅತ್ಯಂತ ಉಚ್ಚ ಶಾಸನೀಯ ಅಧಿಕಾರ ಸ್ಥಾನವಾದ ಭಾರತ ಸಂಸದನಿಂದ ನಿರ್ದಿಷ್ಟವಾಗಿ ತೀರ್ಮಾನವಾಗಿರುವಾಗ ಹಳೆಯ ಗಾಯಗಳನ್ನು ಮತ್ತೆ ಕೆದಕುವುದರ ಅರ್ಥವೇನು?

ತಾಲ್ಲೂಕು ಅಥವಾ ತಹಸೀಲ್ದಳಿಗೆ ಹಲವು ಸ್ಥಳಗಳಲ್ಲಿ ಹೊರತು, ತೊಂದರೆ ಮಾಡಬಾರದೆಂದು ರಾಜ್ಯ ಪುನರ ವಿಂಗಡಣಾ ಆಯೋಗವು ಸಮಂಜಸವಾಗಿ ಹೇಳಿತ್ತು, ಪಂಜಾಬ್ ಮತ್ತು ಹರಿಯಾಣ ನಡುವಿನ ಗಡಿಯನ್ನು ಗುರುತಿಸಲು ನೇಮಿಸಿರುವ (ಇತ್ತೀಚಿನ ಆಯೋಗವಾದ) ಷಾ ಆಯೋಗವು ಕೂಡಾ ಅದೇ ತತ್ವವನ್ನು ಒಪ್ಪಿಕೊಂಡಿದೆ ಮತ್ತು ಅದೇ ರೀತಿ ತೀರ್ಮಾನ ಮಾಡಲಾಗಿದೆ. ವಾಸ್ತವವಾಗಿ, ಷಾ ಆಯೋಗವು ಅತ್ಯವಸರ ಪರಿಸ್ಥಿತಿಯ ಹೊರತು, ಜಿಲ್ಲೆಗಳನ್ನು ಕೂಡಾ ಭಾಗ ಮಾಡಿಲ್ಲ, ಷಾ ಆಯೋಗವು ಬೆಟ್ಟದ ತಪ್ಪಲಿನಲ್ಲಿರುವ ಹಳ್ಳಿಗಳನ್ನು ಬೆಟ್ಟ ಪ್ರಾಂತ್ಯಗಳಿಂದ ಕೂಡಿದ ಹಿಮಾಚಲ ಪ್ರದೇಶಕ್ಕೆ ನೀಡಿದೆ. ಇದರ ಹೊರತು ಗಡಿಯನ್ನು ನಿರ್ಧರಿಸುವಾಗ ಬೇಕಾದ ಪರಿಗಣನೆಯನ್ನೂ ಮಾಡಿಲ್ಲ ಇಲ್ಲಿ ಕೂಡ, ಬದಲಾಗಬೇಕಾಗಿರುವ ಜನಸಂಖ್ಯೆ ಶೇಕಡಾ ೭೦ ಎಂದು ನಿರ್ಧರಿಸಲಾಗಿತ್ತು, ಶೇಕಡಾ ೭೦ ಕ್ಕಿಂತ ಕಡಿಮೆ ಬದಲಾವಣೆ ಮಾಡಲು ಸಾಧ್ಯವಿಲ್ಲ, ಹಾಗೆ ಮಾಡಿ ಪ್ರದೇಶಗಳನ್ನು ವರ್ಗಾವಣೆ ಮಾಡಿದ ಪಕ್ಷದಲ್ಲಿ ಉಳಿದವರು ಅನಾನುಕೂಲಕ್ಕೆ ಗುರಿಯಾಗುತ್ತಾರೆ ಆ ಕಾರಣಕ್ಕಾಗಿ ಒಂದು ನಿರ್ದಿಷ್ಟ ಭಾಷೆಯನ್ನು ಮಾತನಾಡುವ ಜನರನ್ನು ಸ್ವಲ್ಪ ಸಂಖ್ಯೆಯಲ್ಲಿ ಇತರೆ ರಾಜ್ಯಗಳಲ್ಲಿ ಇರಬೇಕೆಂದುಕೊಂಡಿದ್ದರು, ಒಂದು ವೇಳೆ ಅವರು ಅಲ್ಪಸಂಖ್ಯಾತರಾದರೆ

ಅವರನ್ನು ತಾತ್ಸಾರ ಮಾಡಲಾಗುತ್ತದೆ. ಅದೇ ಅವರು ಸಾಕಷ್ಟು ಸಂಖ್ಯೆಯಲ್ಲಿದ್ದರೆ ಅವರಿಗೆ ಬೇಕಾದ್ದನ್ನು ಹೋರಾಡಿ ಪಡೆದುಕೊಳ್ಳುವ ಸಾಮರ್ಥ್ಯ ಹೊಂದಿರುತ್ತಾರೆ. ಒಟ್ಟಾರೆ ಅಲ್ಪಸಂಖ್ಯಾತರ ಹಿತಾಸಕ್ತಿ, ಭಾಷೆ ಮತ್ತು ಸಂಸತಿಯನ್ನು ರಕ್ಷಿಸಲಾಗುತ್ತದೆಯೇ ಎಂಬುದೇ ಅಲ್ಪಸಂಖ್ಯಾತರ ಸಮಸ್ಯೆ.

ಗೊತ್ತಿದ್ದಂತೆ ಹಲವು ಕನ್ನಡ ಮಾತನಾಡುವ ಮತ್ತು ಮರಾಠಿ ಮಾತನಾಡುವ ಸಣ್ಣ ಪ್ರದೇಶಗಳಿವೆ. ವಲಯ ಮಂಡಳಿಗಳು ಈ ವಿಷಯವಾಗಿ ಮಾತ್ರ ಗಮನಹರಿಸಬೇಕಾಗಿದೆ. ಈಗ ಇಡೀ ಪ್ರಶ್ನೆಯನ್ನು ಮತ್ತೆ ಹೊರತೆಗೆಯುವುದು ಕಾರ್ಯಶೀಲ ಜ್ಞಾನವೆನಿಸುವುದಿಲ್ಲ ಈ ಎಲ್ಲ ಕ್ರಮಗಳನ್ನು ನಾವು ಪರಿಗಣನೆಗೆ ತೆಗೆದುಕೊಂಡಿದ್ದೇವೆ ಮತ್ತು ನನ್ನ ಪ್ರಕಾರ ವಲಯ ಮಂಡಳಿಯಲ್ಲಿ ಎರಡು ಬಾರಿ ಭೇಟಿಯಾಗಿದ್ದೆವು. ಆಗ ವಿಷಯ ಚರ್ಚೆಗೆ ಬಂತು, ಆದರೆ ದುರದೃಷ್ಟವಶಾತ್ ಬೊಂಬಾಯಿಯಿಂದ ಗುಜರಾತ್ ಹೊರಬಂದು ಎರಡು ರಾಜ್ಯಗಳಾದಾಗ ನಮ್ಮನ್ನು ಪಶ್ಚಿಮ ವಲಯ ಮಂಡಳಿಯಿಂದ ತೆಗೆದುಹಾಕಲಾಯಿತು. ಈಗ ನಾವು ಶಾಶ್ವತವಾಗಿ ದಕ್ಷಿಣ ವಲಯ ಮಂಡಳಿಯಲ್ಲಿದ್ದೇವೆ. ಈಗ ಹಳೆಯ ವಲಯವು ಕಾರ್ಯನಿರ್ವಹಿಸುತ್ತಿಲ್ಲ ಮತ್ತು ಅದನ್ನು ಈ ವಲಯವನ್ನು ಪುನಶ್ಚೇತನಗೊಳಿಸಬೇಕೆ ಇಲ್ಲವೆ ಎಂಬ ವಿಷಯ ವಲಯ ಮಂಡಳಿಯ ಪರಿಶೀಲನೆಯಲ್ಲಿದೆ.

ಹಲವು ಸಣ್ಣ ಪ್ರದೇಶಗಳನ್ನು ವರ್ಗಾಯಿಸಲು ನಮಗೆ ಒಪ್ಪಿಗೆ ಇದೆ, ನಾನು ಈ ವಿಷಯವಾಗಿ ೧೯೬೨ ರಲ್ಲಿ ಮಹಾರಾಷ್ಟ್ರದ ಮುಖ್ಯಮಂತ್ರಿಗಳಿಗೆ ಪತ್ರ ಬರೆದಿದ್ದೆ ಮತ್ತು ಮತ್ತೆ ಈಗಿನ ಮುಖ್ಯಮಂತ್ರಿಗಳಿಗೂ ೧೯೬೫ ರಲ್ಲಿ ಪತ್ರ ಬರೆದು ಅವರು ಒಪ್ಪಿದಲ್ಲಿ ಅವರಿಗೆ ಸೆಪ್ಟಂಬರ್ ೧೯೬೫ ರಲ್ಲಿ ಮೈಸೂರಿನಿಂದ ಮಹಾರಾಷ್ಟ್ರಕ್ಕೆ ಮತ್ತು ಮಹಾರಾಷ್ಟ್ರದಿಂದ ಮೈಸೂರಿಗೆ ವರ್ಗಾಯಿಸಬೇಕಾದ ಪ್ರದೇಶಗಳ ಪಟ್ಟಿಯನ್ನು ಕಳುಹಿಸುತ್ತೇನೆಂದು ಬರೆದಿದ್ದೆ. ಇದಕ್ಕೆ ಉಭಯ ಪಕ್ಷಗಳೂ ಒಪ್ಪಿದಲ್ಲಿ ನಾನು ಈಗಾಗಲೇ ಪ್ರಕಟಪಡಿಸಿರುವ ತತ್ವಗಳಿಗನುಗುಣವಾಗಿ ಕಾರ್ಯರೂಪಕ್ಕೆ ತರಬಹುದು. ಈ ವಾಸ್ತವವು ನನ್ನ ಮಿತ್ರ ಶ್ರೀ. ಚವಾನರವರ ಹೇಳಿಕೆಯಿಂದ ವ್ಯಕ್ತವಾಗುತ್ತದೆ. ೧೯೫೬ ರ ರಾಜ್ಯ ಪುನರ್ ವಿಂಗಡಣಾ ಕಾಯಿದೆಯನ್ನು ಉಲ್ಲೇಖಿಸುತ್ತಾ (ಮಹಾರಾಷ್ಟ್ರ ಸರ್ಕಾರವು) ವಲಯ ಮಂಡಳಿಯ ಮುಂದೆ ತನ್ನ ಮೊದಲ ದೂರಿನಲ್ಲಿ ಈ ರೀತಿ ಹೇಳುತ್ತದೆ. ರಾಜ್ಯಗಳ ಪುನರ್ ವಿಂಗಡನೆಯ ಮುಖ್ಯ ಚೌಕಟ್ಟು ರಾಷ್ಟ್ರದ ಅತ್ಯುನ್ನತ ಪ್ರಜಾಪ್ರಭುತ್ವ ವೇದಿಕೆಯಾದ ಸಂಸದಿನ ಶಾಸನದ ಮೂಲಕ ತೀರ್ಮಾನವಾಗಿದ್ದರೂ ಇನ್ನೂ ಅನೇಕ ಚಿಕ್ಕ ಪ್ರಾದೇಶಿಕ ಹೊಂದಾಣಿಕೆಗಳನ್ನು ಇನ್ನೂ ಪರಿಗಣಿಸಬೇಕಾಗಿದೆ; ನಾನು ಒಪ್ಪುತ್ತೇನೆ, ಇದನ್ನು ಪರಿಷ್ಕರಿಸಲು ಏಕ ಸದಸ್ಯ ಆಯೋಗವಾಗಲಿ, ತ್ರಿಸದಸ್ಯ ಆಯೋಗವಾಗಲಿ ಈ ಕೆಲಸವನ್ನು ಯಾರಾದರೊಬ್ಬರು ಮಾಡಲೇಬೇಕು. ನಾವು ನಮ್ಮಲ್ಲೇ ಒಪ್ಪಿಕೊಂಡರೆ ಬಹಳ ಒಳ್ಳೆಯದು ನಾನೀಗಾಗಲೇ ಹೇಳಿರುವಂತೆ ಕಾಸರಗೋಡಿಗೆ ಸಂಬಂಧಿಸಿದಂತೆ ಅದು ಕೇರಳ ಒಪ್ಪಿಕೊಂಡಿರುವ ವಿಷಯ. ಕಾಂಗ್ರೆಸ್ ಇತರೇ ರಾಜಕೀಯ ಪಕ್ಷಗಳು ಮತ್ತು ಕೇರಳದಲ್ಲಿ ಅಧಿಕಾರದಲ್ಲಿರುವವರೂ

ಅದು ಮೈಸೂರಿಗೆ ಸೇರಿದ್ದೆಂದು ಒಪ್ಪುತ್ತಾರೆ, ಆದರೆ ದಯವಿಟ್ಟು ಸ್ವಲ್ಪಕಾಲ ತಡೆಯಿರಿ ಎಂದು ಹೇಳುತ್ತಾರೆ. ಆದ್ದರಿಂದ ಇದು ಒಪ್ಪಿಕೊಂಡಿರುವ ವಾಸ್ತವ ಸಂಗತಿ. ಹಲವು ಗ್ರಾಮಗಳು ಆ ಕಡೆ ಈ ಕಡೆ ಹಂಚಿಹೋಗಿವೆ ಎಂಬುದು ವಾಸ್ತವ, ಮೈಸೂರು ರಾಜ್ಯದ ನಿಲುವು ಕೂಡ ಇದೇ ಆಗಿದೆ.

ಹಲವು ಚಿಕ್ಕ ಹೊಂದಾಣಿಕೆಗಳ ಹೊರತು ಈ ವಿಷಯಗಳನ್ನು ಮತ್ತೆ ಹೊರತೆಗೆಯುವುದು ಮೂರ್ಖತ್ವ ಎಂಬುದನ್ನು ನಾವು ಸ್ಪಷ್ಟಪಡಿಸಿದ್ದೇವೆ. ಈ ಚಿಕ್ಕ ಚಿಕ್ಕ ವ್ಯತ್ಯಾಸಗಳನ್ನು ಸರಿಮಾಡಲು ಸಾಧ್ಯವಿದೆ. ಆದರೆ ಅದಕ್ಕಾಗಿ ಸೂಕ್ತ ಸಮಯ ಮತ್ತು ಅವಕಾಶಕ್ಕಾಗಿ ಕಾಯಬೇಕಾಗಿದೆ. ನಾವು ಅದನ್ನು ಮಾಡುತ್ತೇವೆ ಆದರೆ ಈಗ ಸಮಯ ಅದಕ್ಕೆ ಸೂಕ್ತವಾಗಿಲ್ಲ. ಸಣ್ಣ ಸಣ್ಣ ವಿಷಯಗಳಿಗಾಗಿ ನಮ್ಮೊಳಗೇ ನಾವು ಜಗಳವಾಡಲು ಇದು ಸಮಯವೂ ಅಲ್ಲ. ನಮಗೆ ತೊಂದರೆಗಳಿರಬಹುದು ನಾವು ಅದನ್ನು ಪರಿಹರಿಸಿಕೊಳ್ಳಬೇಕು. ಮಹಾರಾಷ್ಟ್ರಿಯನ್ನರು ನಮ್ಮ ಜನರಷ್ಟೇ ಒಳ್ಳೆಯವರು ಆದ್ದರಿಂದ, ಎಂದಿಗೂ ನಾವು ನಮ್ಮ ದೇಶಕ್ಕೆ ಮತ್ತು ನಮ್ಮ ಜನರಿಗೆ ಕಾರ್ಯವಂಚಿತರಾಗದೆ ವಾರಿತಪ್ಪದಂತಿರಲು ಅವರಲ್ಲಿ ಮತ್ತು ನಮ್ಮ ದೇಶದ ಆತ್ಮಸಾಕ್ಷಿಯಲ್ಲಿ ಮೊರೆಯಿಡುತ್ತೇನೆ.

## ಅವಿಶ್ವಾಸ ಪ್ರಸ್ತಾವದ ಕುರಿತು ಚರ್ಚೆ

## 9ನೇ ಅಕ್ಟೋಬರ್ 1963

ಸ್ವಾಮಿ, ಅಧ್ಯಕ್ಷರೆ, ಈಗ ಎರಡು ದಿವಸಕ್ಕಿಂತ ಮೇಲ್ಪಟ್ಟು ಸ್ವಾರಸ್ಯವಾದ ಭಾಷಣಗಳನ್ನು ಕೇಳಿದೆವು. ತಾವು ದಯವಿಟ್ಟು ಎಷ್ಟು ಜನಕ್ಕೆ ಬೇಕೋ ಅಷ್ಟು ಜನಕ್ಕೆ ಅವಕಾಶ ಕೊಟ್ಟಿದ್ದೀರಿ. ಏಕೆ ಈ ನಿರ್ಣಯ ಬಂತು ಎಂದು ಯೋಚನೆ ಮಾಡಿದೆ. ಬಹುಶಃ ಒಂದು ಅವಕಾಶ ಸಿಕ್ಕಲಿಲ್ಲವೆಂದು ಕಾಣುತ್ತದೆ ನಮ್ಮ ವಿರೋಧ ಪಕ್ಷದ ಸ್ನೇಹಿತರಿಗೆ ಬಯ್ಯುವುದಕ್ಕೆ ಒಂದು ಅವಕಾಶವಿತ್ತು, ಅದು ತಪ್ಪಿ ಹೋಯಿತು ಎಂದು ಇದನ್ನು ತಂದಿರಬಹುದು.ಲೋಕಸೇವಾ ಆಯೋಗದ ವಿಚಾರದಲ್ಲಿ ರಿಪೋರ್ಟ್ ಬಂದಿತ್ತು ಅದು ಈ ಸಭೆಯಲ್ಲಿತ್ತು ಅವರು ಇಲ್ಲದೆ ಇದ್ದಾಗ ಆ ನಿರ್ಣಯವನ್ನು ಒಪ್ಪಿಕೊಂಡೆವು. ಬಯ್ಯುವುದಕ್ಕೆ ಅವಕಾಶ ಸಿಕ್ಕಲಿಲ್ಲವೆಂದು ಮಾರನೆಯ ದಿವಸವೇ ಈ ನಿರ್ಣಯ ಬಂದಿತು. ಅವಿಶ್ವಸ ನಿರ್ಣಯ ಅದಕ್ಕೆ ಅವಕಾಶ ಸಿಕ್ಕಿದ್ದರೆ ಅವಿಶ್ವಾಸ ನಿರ್ಣಯ ಬರುತ್ತಿರಲಿಲ್ಲವೆಂದು ನನಗನ್ನಿಸುತ್ತದೆ ಈ ಸಭೆಗೆ ಸಂಬಂಧಪಟ್ಟಂಥ ನಿಯಮಗಳ ಪ್ರಕಾರ ಅದು ಅಂಗೀಕಾರವಾಯಿತು. ಬಹಳ ಅನ್ಯಾಯ ಮಾಡಿದ್ದೀರಿ ಅದನ್ನು ವಿಚಾರ ಮಾಡುವುದಕ್ಕಾಗುವುದಿಲ್ಲವೇ ಎಂದು ಕೇಳಿದರು. ಅದನ್ನು ಪುನಃ ತೆಗೆದುಕೊಳ್ಳುವುದಕ್ಕಾಗುವುದಿಲ್ಲ , ತೀರ್ಮಾನ ತೆಗೆದುಕೊಳ್ಳಲಾಗಿದೆ ಎಂದು ಹೇಳಿದ್ದಕ್ಕೆ ಸಿಟ್ಟು ಬಂತು ಎಂದು ಕಾಣುತ್ತದೆ ಕೆಲವರಿಗೆ, ಈ ನಿರ್ಣಯವನ್ನು ತಂದಿದ್ದಾರೆ ಈ ನಿರ್ಣಯಕ್ಕೆ ಏನಾದರೂ ಆಧಾರವಿದೆಯೇ ಎಂದು, ಹೊಸದೇನಾದರೂ ಹೇಳಿದ್ದಾರೆಯೇ ಎಂದರೆ ಯೋಚನೆ ಮಾಡಿದರೆ ಒಂದು ವಿಚಾರವೂ ಹೊಸದಲ್ಲ, ಇದೇ ಸಭೆಯಲ್ಲಿ ಒಂದು ವರ್ಷದ ಮೇಲೆ ಒಂದು ತಿಂಗಳ ಕೆಳಗೆ ಅವಿಶ್ವಾಸ ನಿರ್ಣಯವನ್ನು ತಂದರು. ಅಲ್ಲಿ ಹೇಳಿದ್ದೂ ಇದೇ. ಇಲ್ಲಿ ಹೇಳಿದ್ದೂ ಅದೇ. ಇವತ್ತು ಮಾತನಾಡಿದ್ದರ ಪಲ್ಲವಿ ಅನುಪಲ್ಲವಿ ಎಲ್ಲ ಒಂದೇ, ಏನೇನೂ ವ್ಯತ್ಯಾಸ ವಾಗಿಲ್ಲ. ಸಂಗೀತದಲ್ಲಿ ಪಲ್ಲವಿ ಅನುಪಲ್ಲವಿ ಒಂದೇ ಆದರೂ ಮಧ್ಯೆ ಸ್ವಲ್ಪ ಬದಲಾವಣೆ ಇರುತ್ತದೆ ಏನಾದರೂ ವ್ಯತ್ಯಾಸವಿದೆಯೇ ಎಂದರೆ ಏನೇನೊ ಇಲ್ಲ . ಅದೇ ಹಳೇ ಮಾತು, ಅದೇ ಹಳೇ ಜೋಗುಳ, ಹೊಸದು ಯಾವುದೂ ಇಲ್ಲ. ಖಾದಿ ಬೋರ್ಡಿನ ವಿಷಯವನ್ನು ಸಾಕಷ್ಟು ವಿಚಾರ ಮಾಡಿದ್ದಾರೆ ಎಲೆಕ್ಟ್ರಿಸಿಟಿ ಬೋರ್ಡಿನ ವಿಷಯವನ್ನು ಸಾಕಷ್ಟು ವಿಚಾರ ಮಾಡಿದ್ದಾರೆ . ಮತ್ತು ವಗೈರೆ ವಿಷಯಗಳನ್ನೆಲ್ಲ ವಿಚಾರ ಮಾಡಿದ್ದಾರೆ ಎರಡು ವಿಷಯಗಳು ಹೊಸದು ಬಂದಿವೆ. ಅದು ಏನೆಂದರೆ ಎನ್.ಡಿ.ಎಫ್. ರಾಷ್ಟ್ರೀಯ ರಕ್ಷಣಾ ನಿಧಿ ವಿಚಾರದಲ್ಲಿ ಏನೋ ಹಣ ದುರ್ವ್ಯಯ ಮಾಡಿದೆವು ಎಂದು ಮಾನ್ಯ ಶಿವಪ್ಪನವರು ಅಬ್ಬರಿಸಿ ಹೇಳಿದರು. ಅಪಾರವಾದ ಹಣವನ್ನು ಖರ್ಚು ಮಾಡಿದ್ದೇವೆಂದು ಎರಡು ಮೂರು ಸಲ ಅಬ್ಬರಿಸಿ ಹೇಳಿದರು . ಇನ್ನೊಂದು ವಿಷಯ ಏನೆಂದರೆ -ಒಂದು ಸಂತೋಷದ ಮಾತಾಗಿತ್ತು ನನಗೆ, ಇಲ್ಲಿಯವರೆಗೆ ಜಾತೀಯತೆ ಬರುತ್ತರಲಿಲ್ಲ ಇಲ್ಲಿಯವರೆಗೆ-ಇವತ್ತು ಬಂದಿದೆ. ಈ ಸಭೆಯಲ್ಲಿ ಈ ನಿರ್ಣಯ ಬಂದ

---

ವಿಧಾನ ಸಭೆ ನಡವಳಿಕೆ: ದಿ. 9-10-63 ಪುಟ 4839-4852

ಮೇಲೆ ಈಗ ಎರಡು ದಿವಸಗಳಿಂದ ಜಾತೀಯತೆಯನ್ನು ಎತ್ತಿದ್ದಾರೆ ದುರುದ್ದೇಶದಿಂದ ಅದನ್ನು ಹೆಚ್ಚಿಗೆ ಹೇಳಿರತಕ್ಕದ್ದು ಯಾರು ಎಂದರೆ ಯಾರಿಗೆ ಜಾತಿಯ ಅಭಿಮಾನವಿಲ್ಲವೋ ಅಂಥವರಿಂದ ಬಂದಿದೆ, ಅದು ಕಮ್ಯುನಿಸ್ಟ್ ಸದಸ್ಯರಿಂದ ಅವರು ಹೀಗೆ ಏಕೆ ಮಾಡಿದ್ದಾರೆಂದರೆ ಅವರು ಬಹಳ ಬುದ್ಧಿವಂತರು. ಎಲ್ಲಿ ವ್ಯಾಜ್ಯ ಇಲ್ಲವೊ ಅಲ್ಲಿ ವ್ಯಾಜ್ಯ ಹತ್ತಿಸಿ,ಎಲ್ಲಿ ಜನ ಸುಖವಾಗಿದ್ದಾರೆಯೋ ಅಲ್ಲಿ ಅಲೋಲಕಲ್ಲೋಲವನ್ನುಂಟು ಮಾಡಿ, ಎಲ್ಲಿ ನೆಮ್ಮದಿ ಇದೆಯೋ ಅಲ್ಲಿ ನೆಮ್ಮದಿ ಇಲ್ಲದಂತೆ ಮಾಡಿ ವ್ಯತ್ಯಾಸವನ್ನುಂಟುಮಾಡಿ, ಆಳತಕ್ಕದ್ದೇ ಅವರ ನೀತಿ, ಅವರು ತಂದಿದ್ದಾರೆ ಈ ಜಾತಿಯ ವಿಚಾರವನ್ನು. ಅದಕ್ಕೆ ಒಬ್ಬಿಬ್ಬರು ಪುಟ ಕೊಟ್ಟಿದ್ದಾರೆ, ಅದು ವಿಷಾದದ ಮಾತು. ಈ ಎರಡು ವಿಚಾರಗಳು ಹೊಸದಾಗಿವೆ. ಇದನ್ನು ತರಬಾರದಾಗಿತ್ತು. ಯಾರೂ ಜಾತೀಯತೆಯಿಂದ ಕೆಲಸ ಮಾಡುತ್ತಿಲ್ಲ ಎಂದು ಹೇಳುತ್ತೇನೆ ಆ ದೃಷ್ಟಿ ನಮಗೆ ಇಲ್ಲ. ಮಂತ್ರಿಮಂಡಲ ಮಾಡಬೇಕಾದರೆ ಒಂದೇ ಜಾತಿಯವರಿಗೆ ಸ್ಥಳವನ್ನು ಜಾಸ್ತಿ ಕೊಟ್ಟೆವಂತೆ ಎಲ್ಲಿಯ ವಾದವಿದು ? ಬಹುಶಃ ಅದಕ್ಕೆ ನಾನೇನೂ ಉತ್ತರಗಳನ್ನು ಕೊಡುವುದಕ್ಕೆ ಇಷ್ಟಪಡುವುದಿಲ್ಲ ಅದನ್ನು ಒಪ್ಪತಕ್ಕ ಮನಸ್ಸಿಲ್ಲ ಎಂದು ಮಾತ್ರ ಹೇಳುತ್ತೇನೆ ಹೇಯವಾದ ಮನಸ್ಸಿನಿಂದ ಹೇಳಿದ್ದಾರೆ.

ರಾಷ್ಟ್ರೀಯ ರಕ್ಷಣಾ ನಿಧಿಯ ಸಂಗ್ರಹಣದಲ್ಲಿ ಜನ ಸಾಕಷ್ಟು ಕೊಟ್ಟರು. ಎಲ್ಲರೂ ಕೊಟ್ಟಿದ್ದಾರೆ. ಅವರುಗಳು ಎಷ್ಟು ಜನ ಕೊಟ್ಟಿದ್ದಾರೆಯೋ ಗೊತ್ತಿಲ್ಲ. ಜನತೆಯ ಪ್ರತಿನಿಧಿ ಹಾಗೂ ಮುಖಂಡರಿಗೆ ಇಂಥ ಒಂದು ಪ್ರಮಾದ ಒದಗಿದೆ, ಶತೃಗಳು ನಮ್ಮ ಮೇಲೆ ದಂಡೆತ್ತಿ ಬಂದಿದ್ದಾರೆ, ಎಲ್ಲರೂ ಮುಂದೆ ಬಂದಿದ್ದಾರೆ ಎಲ್ಲರೂ ಅದಕ್ಕೆ ಬರಬೇಕು, ಸಹಾಯಕರಾಗಬೇಕು, ಸಹಾಯ ಮಾಡಬೇಕು ಎಂದು ಕೇಳಿದಾಗ ಎಲ್ಲರೂ ಮುಂದೆ ಬಂದಿದ್ದಾರೆ, ಶ್ರೀಮಂತರು ಬಂದಿದ್ದಾರೆ - ಶ್ರೀಮಂತರು ಅಷ್ಟು ಬಂದಿಲ್ಲ ಬಡವರು ಹೆಚ್ಚು ಕೊಟ್ಟಿದ್ದಾರೆ. ಬಿಜಾಪುರ, ಚಿತ್ರದುರ್ಗ, ಬೆಳಗಾಂ, ಮಂಗಳೂರು ಎಲ್ಲ ಕಡೆಯೂ ಕೊಟ್ಟಿದ್ದಾರೆ . ಒಂದು ವಿಚಾರವನ್ನು ಹೇಳಿದರು ನಮ್ಮ ಬಿ. ಎಲ್. ಗೌಡರು ಒಂದು ಕಮಿಟಿಗೆ ಯಾರೋ ಒಬ್ಬರನ್ನು ಕಾಂಗ್ರೆಸ್ನಲ್ಲಿಲ್ಲದೆ ದೇಶಕ್ಕಾಗಿ ದುಡಿಯದ ಇದ್ದವರನ್ನು ಕನ್ವೀನರ್ ಆಗಿ ಮಾಡಿದರು, ಸಂಚಾಲಕರಾಗಿ ಮಾಡಿದರು ಆದರಿಂದ ಏನೂ ಪ್ರಯೋಜನವಾಗದೆ ಎಲ್ಲ ನಿಂತು ಹೋಯಿತು ಎಂದು. ಇಲ್ಲಿ ಕೇಂದ್ರ ಸಭೆಯನ್ನು ಮಾಡಿದೆವೋ ಆಗಲೇ ಎಲ್ಲ ಕಮಿಟಿಗಳನ್ನು ನೇಮಕ ಮಾಡಿದೆವು ಹಾಗೇಯೇ ಇವರನ್ನೂ ನೇಮಕ ಮಾಡಿದೆವು ಅದು ಹೋದ ವರ್ಷ ಅಕ್ಟೋಬರ್ ನವಂಬರ್ ತಿಂಗಳಿನಲ್ಲಿ . ಆ ಕಮಿಟಿಯನ್ನು ಮಾಡಿದಾಗಿನಿಂದ ಚೆನ್ನಾಗಿ ಪ್ರಚಾರ ಮಾಡುತ್ತಿದ್ದಾರೆ. ಅವರು ವಿದ್ಯಾವಂತರು, ಸಂಸತ, ಕನ್ನಡ, ತೆಲುಗು ಎಲ್ಲ ಭಾಷೆಗಳೂ ಬರುತ್ತವೆ. ಬಹಳ ಚೆನ್ನಾಗಿ ವ್ಯವಸ್ಥ ಮಾಡಿಕೊಂಡು ಹೋಗಿದ್ದಾರೆ. ಅವರು ಏನಾದರೂ ಒಂದು ಹೇಳಬೇಕಾಗಿರುವುದರಿಂದ ಹೇಳಿದ್ದಾರೆ.

ಈಗ 2-3 ದಿನಗಳಿಂದ ಏನು ನಡೆಯುತ್ತಿದೆ ಎಂದರೆ ಏನಾದರೂ ಒಂದು

ತಪ್ಪನ್ನು ಕಂಡು ಹಿಡಿಯಬೇಕು, ಏನೂ ಇಲ್ಲದೆ ಇದ್ದರೆ ಹುಟ್ಟು ಹಾಕಬೇಕು . ಈ ಒಂದು ದೃಷ್ಟಿ ಕಂಡು ಬರುತ್ತಿದೆಯೇ ವಿನಾ ಇರತಕ್ಕದ್ದರಲ್ಲಿ ಏನಾದರೂ ಲೋಪವಿದೆಯೇ, ಸರ್ಕಾರ ಮಾಡತಕ್ಕ ಕಾರ್ಯದಲ್ಲಿ ಲೋಪವಿದೆಯೇ ಅಥವಾ ಇನ್ನೂ ಯಾವುದಾದರೂ ತಪ್ಪು ದಾರಿ ಹಿಡಿದಿದ್ದಾರೆಯೇ ಎನ್ನು ವುದೇನೂ ಕಾಣುವುದಿಲ್ಲ. ಬಿಜಾಪುರದಲ್ಲಿ ಬಳೆಗಳನ್ನು ಬಿಚ್ಚಿಕೊಟ್ಟರು ಹೆಣ್ಣು ಮಕ್ಕಳು ಎಂದು ಹೇಳಿದರು. ಹೆಣ್ಣು ಮಕ್ಕಳ ಕೈಯಿಂದ ಬಾರದೆ ಬೇರೆ ಕೈಯಿಂದ ಬಳೆಗಳು ಬರುತ್ತವೆಯೇ ? ಅವರಾಗಿಯೇ ಬಳೆಗಳನ್ನು ತಂದು ಕೊಟಿದ್ದಾರೆ, ಶ್ರೀಮತಿ ಇಂದಿರಾ ಗಾಂಧಿಯವರ ತೂಕದಷ್ಟು ಚಿನ್ನವನ್ನು ಕೊಡಬೇಕೆಂದು ತೂಕ ಮಾಡಿದಾಗ ಒಬ್ಬ ಹೆಣ್ಣು ಮಗಳು ದೇವರನ್ನು ಕೈಯಲ್ಲಿ ಹಿಡಿದುಕೊಂಡು ಕರಡಿಗೆ ಯನ್ನು ತಂದುಕೊಟ್ಟರು. ಕೆಲವರು ಮೈಮೇಲೆ ಇದ್ದ ಬಂಗಾರವನ್ನು ಕೊಟ್ಟರು. ಹಾಗೆ ಕೊಡತಕ್ಕ ಸಂದರ್ಭದಲ್ಲಿ ಏನಾಯಿತು ಎಂದರೆ ಅದು ನಡೆದುದ್ದು ಹಿಂದಿನ ದಿವಸ. ಅಲ್ಲಿಯವರು ಮುಖ್ಯಮಂತ್ರಿಯವರನ್ನು ತೂಕ ಮಾಡುತ್ತೇವೆ ಎಂದು ಹೇಳಿದಾಗ, ಇಂದಿರಾ ಗಾಂಧಿಯವರನ್ನು ತೂಕ ಮಾಡುತ್ತೇವೆಂದು ಹೇಳಿದಾಗ ಯಾವ ಜನ ಈ ನಿಧಿಗೆ ಸಹಾಯ ಮಾಡಿದರು, ಶಕ್ತಿ ಮೀರಿ ಸಹಾಯ ಮಾಡಿದ್ದರೋ, ಆ ಜನ ಲಕ್ಷಾನುಗಟ್ಟಲೆ ಬಂದಿದ್ದರು ಅಲ್ಲಿ ಕೆಲವರಿಗೆ ಇದು ಹಿಡಿಸಲಿಲ್ಲ. ಇದರಿಂದ ಒಳ್ಳೆಯದಾಗುತ್ತದೆ, ಇಷ್ಟೊಂದು ಜನ ಸೇರಿದರೆ ಜನಗಳಲ್ಲಿ ಉತ್ಸಾಹ ಬಂದೀತು, ರಾಷ್ಟ್ರ ಪ್ರೇಮ ಜಾಸ್ತಿಯಾದೀತು, ತಮ್ಮ ದೇಶವನ್ನು ಕಾಪಾಡುವುದಕ್ಕೆ ಜನ ಎದ್ದು ಬರುತ್ತಾರೆ, ಅದಕ್ಕೋಸ್ಕರ ಇಂಥದಕ್ಕೆ ಸಹಾಯ ಮಾಡಬೇಕು ಎಂಬುದನ್ನು ಮರೆತರು. ಇದನ್ನು ರಾಷ್ಟ್ರ ದ್ರೋಹವೆಂದು ತಿಳಿದುಕೊಳ್ಳುತ್ತೇನೆ ಕೆಲವು ಜನ ಹೋಗಿದ್ದು, ಇಲ್ಲಿಂದಲೂ ಹೋಗಿ ಅದು ಆಗ ಕೂಡದು.... ....

ಹೀಗೆ ಅದಕ್ಕೆ ತಕರಾರು ಹಾಕಬೇಕೇಂದು ಪ್ರಯತ್ನ ಪಟ್ಟರು. ಜನ ಕೇಳುತ್ತಾರೆಯೇ ? ಏಳೆಂಟು ಹಸ್ತಪ್ರತಿ (ಹ್ಯಾಂಡ್ ಬಿಲ್ಸ್)ಗಳನ್ನು ಹಂಚಿ ಬಿಸಾಕಿದರು. ಅದನ್ನು ನೋಡಿ ನಾವು ನಕ್ಕೆವು, ಇಂಥ ಜನರು ಇದ್ದಾರಲ್ಲ ಎಂದು ಕನಿಕರಪಟ್ಟೆವು ಅಷ್ಟೆ. ಆ ಸಮಾರಂಭಕ್ಕೆ ಲಕ್ಷಾಂತರ ಜನರು ಬಂದಿದ್ದರು, ಅವರ ಉತ್ಸಾಹವನ್ನು ನೋಡಿ ಸಂತೋಷ ಕೂಡ ಪಟ್ಟೆವು. ತುಲಾಭಾರ ಮಾಡಿದರು. ನನಗೆ ಇಷ್ಟವಿರಲಿಲ್ಲ ತೂಕವಾಗಿದ್ದೀರಿ, ಸ್ವಲ್ಪ ಬನ್ನಿ ಎಂದು ಹೇಳಿದರು. ಅದೇ ರೀತಿ ಬೆಳಗಾಂನವರೂ ಒತ್ತಾಯ ಮಾಡಿದರು. ನಿಮ್ಮನ್ನು ತೂಕ ಮಾಡುತ್ತೇವೆಂದರು . ಬರತಕ್ಕ ನಿಧಿ ಬರಬೇಕಾದರೆ ನನ್ನನ್ನು ತೂಗಿದರೆ, ತೂಕ ಮಾಡಿದರೆ ನನ್ನ ತೂಕ ಕಡಿಮೆಯಾಗುತ್ತದೆಯೆ ? ಜನರು ತಾವಾಗಿಯೇ ಮುಂದೆ ಬಂದು ಮಾಡಿರತಕ್ಕದ್ದು, ಅದಕ್ಕೆ ಅಪಾರವಾದ ಖರ್ಚಾಗಿದೆ ಎಂದು ಮಾನ್ಯ ಸದಸ್ಯರು ಹೇಳಿದರು. ಅದಕ್ಕೆ ನಾವು ಒಂದು ಕಾಸನ್ನೂ ಖರ್ಚು ಮಾಡಲಿಲ್ಲ ಅಥವಾ ರಾಷ್ಟ್ರೀಯ ರಕ್ಷಣಾ ನಿಧಿಯಿಂದ ಒಂದು ಕಾಸನ್ನು ಖರ್ಚು ಮಾಡಲಿಲ್ಲ . ನಾನು ವಿಚಾರಿಸಿದೆ. ಜನ ತಾವಾಗಿಯೇ ಕಂಬ ತಂದು ಹಾಕಿದರು, ತಾವಾಗಿಯೇ ಕಾಗದ ತಂದರು, ಗಳ ತಂದರು, ಚಪ್ಪರ ಹಾಕಿದರು, ಅವರಷ್ಟಕ್ಕೆ ಅವರೇ ಎಲ್ಲವನ್ನೂ ಮಾಡಿದರು. ಯಾರೂ, ಏನೂ, ಇದಕ್ಕೆ ಖರ್ಚು ಮಾಡಬೇಕಾದ ಸಂಭವವೇ ಇರಲಿಲ್ಲ. ಜನ ಎಷ್ಟೊಂದು ವಿಶ್ವಾಸದಿಂದ

ಪ್ರೇರಿತರಾಗಿ ಕೆಲಸ ಮಾಡಿದ್ದಾರೆ. ಇದರಲ್ಲಿ 20 ಸಾವಿರ ರೂಪಾಯಿ ಖರ್ಚು ಮಾಡಿದ್ದೇವೆ ಎಂಬುದು ಇವರಿಗೆ ಹೇಗೆ ಗೊತ್ತಾಯಿತು ? ಭಾರತ ಸರಕಾರದವರು ಫಿಲ್ಮ್ ತೆಗೆದುಕೊಳ್ಳುವದಕ್ಕೋಸ್ಕರ ಆ ಜನರನ್ನು ಕಳಿಸಿದ್ದರು. ಇದಲ್ಲದೆ ಬೇರೆ ಒಂದಲ್ಲಿ ಫಿಲ್ಮ್ ತಯಾರುಮಾಡುವುದಕ್ಕೆ ವ್ಯವಸ್ಥೆ ಮಾಡಿದೆ ಎಂದು ಗೃಹಮಂತ್ರಿಗಳು ಹೇಳಿದರು ಎಂದು ಟೀಕೆ ಮಾಡಿದರು. ಈ ಯುದ್ಧ ಸಮಯದಲ್ಲಿ ಜನ ಹೇಗೆ ಸಹಾಯ ಮಾಡುತ್ತಿದ್ದಾರೆ, ಜನ ಎಷ್ಟು ಉತ್ಸಾಹದಿಂದ ಮುಂದೆ ಬಂದು ಹಣ ಕೊಡುತ್ತಿದ್ದಾರೆ, ಪ್ರತಿಯೊಂದು ಊರಿನಲ್ಲಿ ಜನ ಹೇಗೆ ಹಣ ಕೊಡುತ್ತಿದ್ದಾರೆ ಎಂಬುದನ್ನು ಎಲ್ಲ ಜನರಿಗೆ ತೋರಿಸುವುದಕ್ಕಾಗಿ ಒಂದು ಫಿಲ್ಮ್ ತಯಾರು ಮಾಡಲು ಎನ್. ಡಿ.ಎಫ್. ಅವರು ಇದಕ್ಕಾಗಿ ಹತ್ತು ಹದಿನೈದು ಸಾವಿರ ರೂಪಾಯಿ ಕೊಟ್ಟಿದ್ದಾರೆಂದು ಗೊತ್ತಾಗಿದೆ. ಈ ಫಿಲ್ಮ್ ತೆಗೆದುಕೊಳ್ಳುವುದು ಈಗ ಇದಕ್ಕೋಸ್ಕರ ಹುಟ್ಟಿದ್ದು ಅಲ್ಲ. ಇದು ಮೊದಲಿನಿಂದಲೂ ನಡೆಯುತ್ತಿದೆ. ಇದಕ್ಕಾಗಿ ಒಂದು ಕಮಿಟಿ ನೇಮಕ ಮಾಡಿಕೊಂಡಿದ್ದಾರೆ.ಇದಕ್ಕೆ ಎಷ್ಟು ಖರ್ಚಾಯಿತು ನನಗೆ ಗೊತ್ತಿಲ್ಲ. ಹೊಸದಾಗಿ ಏನಾದರೂ ಹೇಳಬೇಕು ಎಂದು ವಿರೋಧ ಪಕ್ಷದವರು ಇವನ್ನು ಪ್ರಸ್ತಾಪಮಾಡಿದ್ದಾರೆ.ಬಹಳ ಒತ್ತಾಯದಿಂದ ಹಣ ವಸೂಲ್ಮಾಡುತ್ತಿದ್ದಾರೆ ಎಂದು, ಅಲ್ಲಲ್ಲಿ ಫಕಾರು ಎಬ್ಬಿಸಿದರು. ಅನೇಕ ಕಡೆ ಪೋಲಿಸ್ ಅಧಿಕಾರಿಗಳನ್ನು ಕಳಿಸಿ ವಿಚಾರಣೆ ಮಾಡಿಸಿದ್ದೇನೆ. ಡ್ಯಪ್ಯುಟಿ ಕಮಿಷನರರನ್ನು ಕಳಿಸಿ ವಿಚಾರಣೆ ಮಾಡಿದೆ. ಕೆಲವು ಕಡೆ ನಾನೇ ಸ್ವತಃ ಹೋಗಿ ವಿಚಾರಣೆ ಮಾಡಿದ್ದೇನೆ. ಎಲ್ಲಿಯೂ ಒತ್ತಾಯ ಮಾಡಿಲ್ಲ ಎಂದು ಕಂಡಿಬಂದಿದೆ. ಒತ್ತಾಯ ಮಾಡಿದ ಒಂದು ಸ್ಥಳದ ಬಗ್ಗೆ ನಾನು ಹೋಗಿ ವಿಚಾರಿಸಲು ಆ ಮನುಷ್ಯ ಇರಲಿಲ್ಲ. ಅವನ ಮಗನನ್ನು ಕರೆಸಿ ವಿಚಾರಿಸಲು ಅವನ ತಂದೆಯು ವಯಸ್ಸಾಗಿದ್ದರಿಂದ ಸತ್ತು ಹೋದನೆಂದೂ, ಹಣ ಕೊಡಲು ಅವನಿಗೆ ಯಾರೂ ಒತ್ತಾಯ ಮಾಡಲಿಲ್ಲ ಎಂದೂ ಮತ್ತು ಅವನು ಸ್ವತಃ ಸಂತೋಷದಿಂದ ಬಂದು ಹಣ ಕೊಟ್ಟಿದಾನೆಂದೂ ಅವನ ಮಗನು ಹೇಳಿದನು ಇಷ್ಟೆ ಅಲ್ಲದೆ, ಕ ಒತ್ತಾಯ ಮಾಡಿದರು ಎಂದು ಹೇಳಿ ಎಂದು ಹೆಳಿ ಕಲಿಸಿಕೊಡುವುದಕ್ಕೆ ಬಂದಿದ್ದರೆಂದೂ ಸಹ ಅವನು ಹೇಳಿದನು. ಇಂಥ ಅಯೋಗ್ಯ ಕೆಲಸ ಮಾಡೋಣವೆ ? ಎಂದು ಸಹ ಹೇಳಿದರು. ಹೀಗೆ ಮಾಡುವುದರಿಂದ ಏನಾಗಿದೆ ಎಂದರೆ ಆಗತಕ್ಕಂಥ ಕೆಲಸಕ್ಕೆ ಅಡಗಾಲು, ಆಗಬಾರದ ಕೆಲಸಕ್ಕೆ ಕುಮ್ಮಕ್ಕು ಮಾಡುತ್ತಿದ್ದಾರೆ.

ಯಾವುದೋ ಅಧಿಕಾರಿಯು ಟ್ರಾನ್ಸ್‌ಫರ್ ಆಯಿತು ಅದಕ್ಕಾಗಿ, ಸರಕಾರ ಹೋಗಬೇಕು. ಖಾದಿ ಬೋರ್ಡಿನ ಲೆಕ್ಕಪತ್ರ ಸರಿಯಾಗಿಲ್ಲ, ಅದಕ್ಕಾಗಿ ಸರಕಾರ ಹೋಗಬೇಕು ಹೀಗೆ ಒಂದಕ್ಕೊಂದು ಸಂಬಂಧವಿಲ್ಲದ್ದನ್ನು ಹೇಳಿ ಸರಕಾರ ಹೊಗಬೇಕು ಎಂದು ಹೇಳುವುದರಲ್ಲಿ ಏನು ಅರ್ಥ ಇದೆ ? ಎಲ್ಲಿಯೋ ಹೊಡೆದರೆ ಹಲ್ಲು ಬಿತ್ತು ಎಂದು ಹೇಳುವ ಹಾಗೆ ಇದು ನಡೆಯುತ್ತಿದೆ. ಖಾದಿ ಬೋರ್ಡಿನ ಕಥೆ ಬಹಳ ಹಿಂದಿನ ಕಥೆ. ಅದನ್ನು ಸಂಬಂಧಪಟ್ಟ ಮಂತ್ರಿಗಳು ಹೇಳಿದ್ದಾರೆ. ಎನ್.ಡಿ.ಎಫ್. ಬಗ್ಗೆ ಈ ರೀತಿ ತಪ್ಪು ಭಾವನೆ ಉಂಟುಮಾಡುವ ಹಾಗೆ ಬಹಿರಂಗವಾಗಿ ಹೇಳಬಾರದು. ಇದುವರೆಗೆ ಜನ ಉತ್ಸಾಹದಿಂದ ಸಂತೋಷದಿಂದ ಹಣ ಕೊಡುತ್ತಾ ಬಂದಿದ್ದಾರೆ. ಜನ ಹೀಗೆ ಕೊಡದೇ ಇದ್ದರೆ ಇಷ್ಟು ಹಣ ಬರುತ್ತಾ

ಇರಲಿಲ್ಲ. ರಾಷ್ಟ್ರೀಯ ರಕ್ಷಣಾನಿಧಿ ಒತ್ತಾಯದಿಂದ ವಸೂಲ್ಮಾಡಬಾರದೆಂದು ಹೇಳಿದ್ದೇವೆ. ಎಲ್ಲಿಯೂ ಒತ್ತಾಯಮಾಡಿಲ್ಲ. ಈಗಾಗಲೇ ಮೂರು ನಾಲ್ಕು ಕೋಟಿಯಷ್ಟು ವಸೂಲಾಗಿದೆ. ಯಾವ ಒತ್ತಾಯ ನಡೆದಿಲ್ಲ, ಮೋಸ ನಡೆದಿಲ್ಲ ಎಂದು ಸ್ಪಷ್ಟವಾಗಿ ಹೇಳುತ್ತೇನೆ. ತುಲಾಭಾರದ ಬಗ್ಗೆ ಸದಸ್ಯರು ಪ್ರಸ್ತಾಪ ಮಾಡಿದ್ದಾರೆ. ತುಲಾಭಾರ ನಡೆಯಿತು ಎಂದು ಸರಕಾರ ಹೋಗಬೇಕೇ ? ಇದು ಒಂದು ಹೊಸ ಕಾರಣ. ಅಲ್ಲಿ ಕೆಲವು ಕಮ್ಯುನಿಸ್ಟ ಸದಸ್ಯರು ಇದ್ದರು. ಇದರಲ್ಲಿ ಜಾತೀಯತೆ ತುಂಬಿದರು. ಅವರು ಬಹಳ ಬುದ್ಧಿವಂತರು, ಜಾಣರು.

ಇನ್ನು ಎಲೆಕ್ಟ್ರಿಸಿಟಿ ಬೋರ್ಡ್ ಲೆಕ್ಕ ಪತ್ರಗಳ ಬಗ್ಗೆ ಹೇಳುವುದಾದರೆ 1957 ನೇ ಇಸವಿ ಮಂಚೆ ಕೆಲವು ಐಟಮ್ಸ್ ಇರಲಿಲ್ಲ ಎಂದು ಗೊತ್ತಾಯಿತು. ಸುಮಾರು 207 ಲಕ್ಷ ರೂಪಾಯಿ ಬಗ್ಗೆ ಸಾಕಷ್ಟು ಲೆಕ್ಕ ಇಲ್ಲ ಎಂದು ಗೊತ್ತಾಯಿತು. ಅದಕ್ಕಾಗಿ ಸರಕಾರ ಒಬ್ಬ ಅಕೌಂಟ್ಸ್ ಆಫೀಸರ್ ನೇಮಕ ಮಾಡಿ ಲೆಕ್ಕ ಪತ್ರ ತರಿಸಿದ್ದೇವೆ ಅವುಗಳ ವಿವರ ಈ ರೀತಿ ಇದೆ :-

| | |
|---|---|
| Outlay on old Electricity Schemes incurred prior to 30-9-57 | Rs. 8,10,000 |
| Total installation of Penstock. | Rs. 2,12,000 |
| T.A. paid between 1941 to 1951 to labour employed in Capital works. | Rs. 21,74,000 |
| Expenditure on replacement of 25 Cycle Motors on Account of Frequency Conversion Scheme. | Rs. 5,00,000 |
| Assets in unserviceable conditions transferred from Government Department. | Rs.20,80,000 |
| Outalay on old works at Sharavathi old transmission lines, outlay on assets not traceable due to renewals and replacements changes in extensive distribution system over 40 years. | Rs. 65,00,000 |

Total: Rs. 207 lakhs.

ಇದು 50 ವರ್ಷಗಳಿಂದ ನಡೆದುಕೊಂಡು ಬಂದಿರುವುದರಿಂದ ಲೆಕ್ಕ ಹುಡುಕುವುದು ಬಹಳ ಕಷ್ಟವಾಗಿದ್ದೆ ಇನ್ನೊಂದು ವಿಷಯ ಸಣ್ಣದು ಇದ್ದರೂ ಅದನ್ನು ಬಹು ದೊಡ್ಡದು ಮಾಡಿ ಏನೋ ಅನಾಹುತ ನಡೆದಿದೆ ಎನ್ನುವ ರೀತಿಯಲ್ಲಿ ಹೇಳಿದರು. ಎರಡು ಬ್ಯಾಂಕುಗಳಿಗೆ ಕೊಟ್ಟುಬಿಟ್ಟಿದ್ದಾರೆ ಹಾಗೆ ಹೀಗೆ, ಎಂದು ಹೇಳಿದರು. ಆ ಎರಡು ಬ್ಯಾಂಕಿನವರು ಜಾಸ್ತಿ

ಕೊಟ್ಟರು ಆದುದರಿಂದ ಅವರಿಗೆ ಕೊಟ್ಟಿದ್ದೇವೆ. ಬಹುಶಃ ಸಾರ್ವಜನಿಕ ಸಾಲ ಕೇಳುವಾಗ ಈ ಸಂಬಂಧದಲ್ಲಿ ಏನೇನು ವಿಷಯ ನಡೆಯುತ್ತದೆ ಎಂಬುದು ಅನೇಕರಿಗೆ ಗೊತ್ತೂ ಇಲ್ಲ. ಸರಕಾರ ಸಾರ್ವಜನಿಕ ಸಾಲ ಕೇಳಿದ ಕೂಡಲೆ ಜನ ಎಲ್ಲವನ್ನೂ ತಾವೇ ಕೊಟ್ಟುಬಿಡುತ್ತಾರೆಂದು ತಿಳಿದುಕೊಂಡಿದ್ದಾರೆ. ಅಲ್ಪಸ್ವಲ್ಪ ಹಣ ಜನ ಕೊಡುತ್ತಾರೆ. ಆದರೆ ಬ್ಯಾಂಕರ್ಸ್ ಹೆಚ್ಚಾಗಿ, ಕೊಡುತ್ತಾರೆ. ಒಂದೊಂದು ಬ್ಯಾಂಕಿನವರು ಇಷ್ಟಿಷ್ಟು ಹಾಕಬೇಕು ಎಂದು ಅಷ್ಟು ಹಣ ಹಾಕುತ್ತಾರೆ. ಇದಕ್ಕಾಗೆ ಒಂದು ಬೋರ್ಡು ಇದೆ. ಬ್ಯಾಂಕಿನವರಿಗೆ ಹೇಳಿಕಳಿಸುತ್ತೇವೆ. ಮತ್ತು ದಯವಿಟ್ಟು ಸಹಾಯ ಮಾಡಬೇಕೆಂದು ಹೇಳುತ್ತೇವೆ. ಮೂರು ಕೋಟಿ ಹಣ ಬೇಕಾಗಿದ್ದರೆ, ಅವರಿಗೆ ಹೇಳಿ ಕಳಿಸುತ್ತೇವೆ. ಅವರು ಹಣ ಕೊಡುವುದಕ್ಕೆ ಒಪ್ಪಿಕೊಂಡು ತಮ್ಮ ತಮ್ಮ ಶಕ್ತ್ಯಾನುಸಾರ ಹಣ ಹಾಕುತ್ತಾರೆ. ಇದರಲ್ಲಿ ಯಾರಿಗೂ ಫೇವರ್ ತೋರಿಸುವುದಿಲ್ಲ. ಒಬ್ಬರು ಮೇಲು, ಮತ್ತೊಬ್ಬರು ಕೀಳು ಎಂದು ಇದರಲ್ಲಿ ಮಾಡಿಲ್ಲ. ಎಂಟು ಹತ್ತು ಬ್ಯಾಂಕಿನವರು ಬಂದು ಇದಕ್ಕೆ ಹಣ ವಸೂಲಾದ ಮೇಲೆ ಅದನ್ನು ಎಲ್ಲಿ ಇಡಬೇಕು ಎಂಬ ಪ್ರಶ್ನೆ ಬರುತ್ತದೆ. ಸರಕಾರದ ಖಜಾನೆಯಲ್ಲಿ ಇಟ್ಟರೆ ಬಡ್ಡಿ ಬರುವುದಿಲ್ಲ. ಆದರಲ್ಲಿಯೂ ಲಾಂಗ್‌ಟರ್ಮ್ ಡಿಪಾಜಿಟ್ ಇದ್ದರೆ ಟ್ರೆಜರಿಯಲ್ಲಿ ತೆಗೆದುಕೊಳ್ಳುತ್ತಾರೆ. ಆದ್ದರಿಂದ ಎಲ್ಲಿ ಹೆಚ್ಚು ಬಡ್ಡಿ ಬರುವುದೋ ಅಲ್ಲಿ ಈ ಹಣ ಇಡಬೇಕು ಎಂದು ತೀರ್ಮಾನಮಾಡಿ ಅದರಂತೆ ಇಟ್ಟಿದ್ದೇವೆ. ಈ ಇಬ್ಬರು ಸದಸ್ಯರಿಂದ ಹೆಚ್ಚಾಗೇ ದುಡ್ಡು ಬಂದಿದೆ. ಒಬ್ಬರು 150 ಲಕ್ಷ ಹಾಕಿದ್ದಾರೆ ಮತ್ತೊಬ್ಬರು 60 ಲಕ್ಷ ಹಾಕಿದ್ದಾರೆ ಈ ಹಣ ಎರಡು ಬ್ಯಾಂಕಿನಲ್ಲಿಟ್ಟಿರುವುದು ತೀರ್ಮಾನಕ್ಕೆ ಅನುಗುಣವಾಗಿ ಇಟ್ಟಿದ್ದೇವೆ. ಇದು ಮಾನ್ಯ ಶಿವಪ್ಪನವರಿಗೆ ಗೊತ್ತಿರಬಹುದು. ನಮ್ಮ ಸುದೈವದಿಂದ ಈ ವ್ಯವಹಾರ ನಡೆದಾಗ ಅವರು ಕನ್ಸಲ್ಟೇಟಿವ್ ಕಮಿಟಿಯಲ್ಲಿ ಇದ್ದರು.

" Sir S. Sivappa while agreeing to the deposits so made, enquired if there is any discrimination in the quantum of deposits.

The Chairman replied that there was no discrimination in this behalf and that the deposits were made in proporation to the subscription made by each Bank."

ಬೇಕಾದಾಗ ತೆಗೆದುಕೊಳ್ಳಲಿಕ್ಕೆ ಬರುತ್ತದೆಂದು ಅನುಕೂಲಕ್ಕೋಸ್ಕರ ಈ ಬ್ಯಾಂಕಿನಲ್ಲಿ ಹಣ ಇಟ್ಟಿರುತ್ತದೆ. 614 ಲಕ್ಷ ರೂಪಾಯಿ ಬಂದಿರುವುದರಲ್ಲಿ ಸುಮಾರು 3 ಕೋಟಿ ರೂಪಾಯಿ ಆಗಿಂದಾಗ್ಗೆ ಖರೀದಿಗೋಸ್ಕರ ಖರ್ಚಾಗಿದೆ. ಇನ್ನೂ ಸುಮಾರು 300 ಲಕ್ಷ ರೂಪಾಯಿ ಇದೆ. ಈ ಹಣ ಇತ್ತಲ್ಲಾ ಈಗ ಏತಕ್ಕೆ ಸಾಲ ತೆಗೆದುಕೊಂಡಿರಿ ಎಂದು ಕೇಳುವುದು ಬುದ್ಧಿವಂತಿಕೆಯ ಮಾತು ಅಲ್ಲ.

ಏಕೆಂದರೆ ಈಗಾಗಲೇ ಒಂದೂವರೆ ಕೋಟಿ ರೂಪಾಯಿ ಬೆಲೆ ಬಾಳುವ ಡೀಸೆಲ್

ಎಂಜಿನ್ ಸೆಟ್ಟು ಅಮೇರಿಕಾದಿಂದ ಬಂದಿವೆ, ಅದಕ್ಕೆ ಕೊಡಬೇಕು. ಶರಾವತಿ ವ್ಯಾಲಿಯಿಂದ ಸಾಧ್ಯವಾದರೆ ಮುಂದಿನ ಏಪ್ರಿಲ್ ನಿಂದ ಸುಮಾರು ಒಂದು ಲಕ್ಷ ಕಿಲೋವಾಟ್ ವಿದ್ಯುಚ್ಛಕ್ತಿ ಬರುತ್ತದೆ, ಅದನ್ನು ಕೊಡಬೇಕಾಗುತ್ತದೆ. ಎಲ್ಲೆಲ್ಲಿ ಅದನ್ನು ಹಂಚಬೇಕಾಗುತ್ತದೆಯೋ ಅಲ್ಲೆಲ್ಲಾ ಗ್ರಾಹಕರಿಗೆ ಕೊಡಲು ಟ್ರಾನ್ಸ್ ಫಾರ್ಮರ್ಸ್ ನ್ನು ತರಿಸಬೇಕು, ಸ್ವಿಚ್ ಗೇರ್ಸ್ ತರಿಸಬೇಕು, ವೈರ್ ತರಿಸಬೇಕು. ಇದಕ್ಕೆಲ್ಲಾ ಬೋರ್ಡ್‌ನವರು 15 ಕೋಟಿ ರೂಪಾಯಿಗಳ ಆರ್ಡರನ್ನು ಕೊಡಬೇಕಾಗುತ್ತದೆ. ಅವರು ಆಜ್ಞೆ ಮಾಡಿದ್ದಾರೆ. ಈ ವರ್ಷ ಮತ್ತು ಇನ್ನು ಎರಡು ಮೂರು ವರ್ಷದಲ್ಲಿ ಬರುತ್ತದೆ. ಹಾಗೆ ಬರುವಾಗ ಅವುಗಳನ್ನು ತೆಗೆದುಕೊಳ್ಳಲು ಯಾವ ಬ್ಯಾಂಕಿನಿಂದ ಹಣ ತೆಗೆದುಕೊಳ್ಳಲು ಅನುಕೂಲವಾಗಿರುತ್ತದೆಯೋ ಆ ಬ್ಯಾಂಕಿನಲ್ಲಿ ಹಣವನ್ನು ಇಡಬೇಕಾಗುತ್ತದೆ ಬ್ಯಾಂಕಿನವರು ಸುಲಭವಾಗಿ ಕೊಡುವುದಿಲ್ಲ. ಅವರು ಬಹಳ ಬುದ್ಧಿವಂತರಿರುತ್ತಾರೆ. ಬಹಳ ಅವಸರ ಇದೆ ಎಂದಾಗ ಅವರು ಮೂರು ಮುಕ್ಕಾಲರಂತೆ ಸಬ್‌ಸ್ಕ್ರೈಬ್ ಮಾಡುತೇವೆ. ನಾಲ್ಕೂ ಮುಕ್ಕಾಲರಂತೆ ಬಡ್ಡಿ ಕೊಡುವುದಲ್ಲ ಎಂದು ಹೇಳುತ್ತಾರೆ. ಅಥವಾ ಬಡ್ಡಿ ಜಾಸ್ತಿ ಕೊಡಬೇಕೆಂದು ಹೇಳುತ್ತಾರೆ. ಆದ್ದರಿಂದ ಯಾವಾಗ ಬಹಳ ಅವಸರ ಇದೆ ಎಂದು ಗೊತ್ತಾದಾಗ. ಆಗ ಬಡ್ಡಿ ಜಾಸ್ತಿ ಮಾಡುತ್ತಾರೆ. ನಮಗೆ ಲುಕ್ಸಾನಾಗುತ್ತದೆ ಎಂದು ಅದಕ್ಕೆ ಬದಲಾಗಿ ಮುಂಜಾಗರೂಕತೆಯಿಂದ ಎರಡು ವರ್ಷಕ್ಕೆ ಎಷ್ಟು ಬೇಕಾಗುತ್ತದೆ ಎಂಬುದನ್ನು ಲೆಕ್ಕಾಚಾರ ಮಾಡಿ ಒಂದೇ ವರ್ಷದಲ್ಲಿ ತರಿಸಿ ವಿವರಗಳೊಂದನ್ನೂ ವಿಚಾರ ಮಾಡದೆ ಅಂಥ ಒಂದು ಕೆಲಸವಾಗಬೇಕಾದರೆ ಅದರ ರೀತಿ ನೀತಿಗಳೇನು ಎಂಬುದನ್ನೊಂದನ್ನೂ ವಿಚಾರ ಮಾಡದೆ, ಇಂಥ ವಿಚಾರಗಳನ್ನು ಇಷ್ಟು ಬೇಜವಾಬ್ದಾರಿಯಾಗಿ ಯಾರೂ ಹೇಳಬಾರದು. ಆ ರೀತಿ ಹೇಳುವುದು ಖಂಡಿತ ಸರಿಯಲ್ಲ

ಇನ್ನು ಖಾದಿ ಬೋರ್ಡಿನಲ್ಲಿ ಬಹಳ ಅನ್ಯಾಯವಾಗಿದೆ ಎಂದು ಹೇಳಿದ್ದಾರೆ. ಆದರೆ ಆ ವಿಚಾರ ನನಗೆ ಗೊತ್ತಿಲ್ಲ. ಆದರೆ, ಆ ರೀತಿ ಆಗಿರಬಹುದು ಎಂದು ಊಹಿಸುವುದಕ್ಕೆ ಅವಕಾಶ ಇದೆ. ಆದರೆ ಶ್ರೀಮಾನ್ ರೇವಣಸಿದ್ದಪ್ಪನವರು ಅದೇನೋ ಮೋಹನಾಸ್ತ್ರ ಎಂದು ಹೇಳಿದರು. ಅದು ಎಂಥ ಮೋಹನಾಸ್ತ್ರವೊ ನನಗೆ ಗೊತ್ತಿಲ್ಲ. ಅವರಿಗೆ ಗೊತ್ತಿರಬಹುದು. ಆದರೆ ಈಗ ಅಲ್ಲಿ ಏನು ನಡೆದಿದೆ ಎಂಬುದು ನನಗೆ ಗೊತ್ತಾಗಬೇಕಾಗಿದೆ. ಇನ್ನೂ ಈಗ ತಾನೆ ನನಗೆ ನಮ್ಮ ಶ್ರೀಮಾನ್ ಜತ್ತಿಯವರು ಕಳೆದ ಫೆಬ್ರವರಿ, ಮಾರ್ಚ್ ತಿಂಗಳಲ್ಲಿ ಖಾದಿ ಬೋರ್ಡಿನ ಅಧ್ಯಕ್ಷರಿಂದ ಒಂದು ಪತ್ರ ಬಂದಿದೆ, ಅದರಲ್ಲಿ ಅಲ್ಲಿಯ ಲೆಕ್ಕಪತ್ರಗಳೊಂದು ಸರಿಯಾಗಿಲ್ಲ ಎಂಬುದಾಗಿ ತಿಳಿಸಿದರು. ಆ ಖಾದಿ ಬೋರ್ಡಾದರೆ ಒಂದು ಸ್ವಾಯತ್ತ ಸಂಸ್ಥೆ. ಆದಾಗ್ಗೂ ಸರ್ಕಾರದ ನಿಗಾ ಅದರ ಮೇಲಿದೆ. ಅದಕ್ಕೆ ಕೇಂದ್ರದಿಂದ ಬಹಳ ಹಣ ಬರುತ್ತದೆ. ಅದೊಂದು ಪವಿತ್ರವಾದ ಸಂಸ್ಥೆಯೂ ಹೌದು. ಆದರೆ ಅದು ಈಗ ಪವಿತ್ರವಾಗಿದೆಯೇ ಅಥವಾ ಅಪವಿತ್ರವಾಗಿದೆಯೇ ಎಂಬುದನ್ನು ಕಂಡುಹಿಡಿಯಬೇಕಾಗಿದೆ. ಆ ಡಿಪಾರ್ಟ್‌ಮೆಂಟಿನ ಪ್ರತಿಯೊಂದು ಲೆಕ್ಕಾಚಾರಗಳನ್ನೂ ತನಿಖೆ ಮಾಡಲು ಒಳ್ಳೇ ನುರಿತ ಎಪ್ಪತ್ತು ಎಂಬತ್ತು ಜನಗಳನ್ನು ಅಲ್ಲಿಗೆ ಈಗ ಕಳುಹಿಸಲಾಗಿದೆ.

ಅವರೀಗ ಅಲ್ಲಿ ಏನೇನಾಗಿದೆ, ಹಣ ದುರುಪಯೋಗ ಆಗಿದೆಯೇ ಅಥವಾ ಇಲ್ಲವೇ ಎಂಬುದನ್ನು ಅವರೀಗ ಕಂಡುಹಿಡಿಯಬೇಕಾಗಿದೆ. ಈಗ ತಾನೆ ಯಾರೋ ಹೇಳಿದರು, ಅಲ್ಲಿ ಒಬ್ಬ ಹೆಂಗಸರಿಗೆ ಮೂರು ನಾಲ್ಕು ಲಕ್ಷ ರೂಪಾಯಿಗಳನ್ನು ಕೊಡಲಾಗಿದೆ ಎಂದು: ಈಗ ಅದನ್ನೆಲ್ಲಾ ವಿಚಾರ ಮಾಡಬೇಕೆಂದು ಆಜ್ಞೆ ಮಾಡಿದ್ದೇವೆ. ಜಾಗ್ರತೆ ಆ ಲೆಕ್ಕಪತ್ರಗಳನ್ನೆಲ್ಲಾ ತಪಾಸ್ ಮಾಡಿ ಅಲ್ಲಿ ಯಾರಿಗೆ ಶಿಕ್ಷೆ ಮಾಡಬೇಕು ಎಂಬುದನ್ನು ಕಂಡುಹಿಡಿದು ತಪ್ಪಿತಸ್ಥರಿಗೆ ಖಂಡಿತ ಶಿಕ್ಷೆ ಮಾಡುತ್ತೇವೆ. ಆದರೆ ಕೆಲವರು ಹೇಳಿದರು ನನಗೆ ಆ ಶಿಕ್ಷೆಮಾಡತಕ್ಕ ಶಕ್ತಿಯಿಲ್ಲ ಎಂದು. ಅವರು ಅದನ್ನು ಹೇಗೆ ಹೇಳಿದರೋ ನನಗೆ ತಿಳಿಯದು. ನಾನೇನೋ ಯಾವಾಗಲೂ ಒಳ್ಳೆಯದನ್ನೇ ಹೇಳುತ್ತಿರುತ್ತೇನೆ. ಅಂದಾಕ್ಷಣಕ್ಕೆ ತಪ್ಪಿತಸ್ಥರನ್ನು ಅವರು ಒಳ್ಳೇ ಮಾತಾಡಿದಾಕ್ಷಣಕ್ಕೆ ಕೈ ಬಿಟ್ಟು ಬಿಡುತ್ತಾರೆಂಬುದು ಸರಿಯಲ್ಲ. ಆ ರೀತಿ ಭಾವಿಸಿರತಕ್ಕವರು ತಪ್ಪು ಮಾಡಿ ಒಂದುಭಾರಿ ನನ್ನ ಕೈಗೆ ಸಿಕ್ಕಿ ನೋಡಲಿ, ಆಗ ನಾನು ಏನು ಮಾಡುತ್ತೇನೆ ಎಂಬುದನ್ನು ತೋರಿಸುತ್ತೇನೆ.

ಇನ್ನು ಕೆಲವರು ದೇಶದಲ್ಲಿ ಲಂಚ ಬಹಳ ಜಾಸ್ತಿಯಾಗಿದೆ, ಅಧಿಕಾರಿಗಳು ಹಾಗೆ ಮಾಡುತ್ತಾರೆ, ಹೀಗೆ ಮಾಡುತ್ತಾರೆ ಎಂದು ಹೇಳಿದರು, ನಿಜ. ಆದರೆ ಈ ಲಂಚ ಎಂಬುದು ದೇಶದಲ್ಲಿ ಎಷ್ಟೋ ಕಾಲದಿಂದ ಹೀಗೇ ನಡೆದುಕೊಂಡು ಬರುತ್ತಿದೆ. ಇದನ್ನು ಈ ದಿವಸ ನಿರ್ಮೂಲ ಮಾಡಬೇಕೆಂದರೆ ಖಂಡಿತ ಸಾಧ್ಯವಿಲ್ಲ. ಇದನ್ನು ವಿರೋಧ ಪಕ್ಷದವರಿಗೂ ನಿರ್ಮೂಲ ಮಾಡಲು ಸಾಧ್ಯವಿಲ್ಲ. ಒಂದು ವೇಳೆ ದೇವರೇ ಇಲ್ಲಿಗೆ ಇಳಿದು ಬಂದರೂ ಆತನಿಗೂ ಇದನ್ನು ತಡೆಗಟ್ಟಲು ಸಾಧ್ಯವಾಗುತ್ತದೆಯೋ ಇಲ್ಲವೊ ಅದು ಗೊತ್ತಿಲ್ಲ. ಈ ಲಂಚ ದೇಶ ಹುಟ್ಟಿದಾಗಿನಿಂದಲೂ ಇದ್ದೇ ಇದೆ. ಆದರೆ ಅನೇಕ ಮಾನ್ಯ ಸದಸ್ಯರಿಗೆ ಈ ಲಂಚಕೋರರನ್ನು ಹಿಡಿದು ಶಿಕ್ಷಿಸುವುದು ಎಷ್ಟು ಕಷ್ಟ ಎನ್ನುವುದು ಗೊತ್ತಿಲ್ಲವೆಂದು ಕಾಣುತ್ತದೆ. ಇದಕ್ಕೆ ಬಹಳ ಅಡಚಣೆಗಳಿವೆ. ಕಾನೂನನ್ನು ಬಿಟ್ಟು ಶಿಕ್ಷಿಸಬೇಕೆಂದರೆ ಬಹಳ ಕಷ್ಟ. ಈ ಬಗ್ಗೆ ಏನು ಮಾಡಬೇಕೆಂದು ನಾವು ಮತ್ತು ಕೇಂದ್ರ ಸರ್ಕಾರದವರೂ ಆಲೋಚನೆ ಮಾಡುತ್ತಿದ್ದೇವೆ. ಇದನ್ನು ಸರಳ ಮಾಡಬೇಕು ಎಂದು ಮಾಡಿದ್ದೇವೆ. ಈ ಸಂಬಂಧದಲ್ಲಿ ನಾವು ಒಂದು ಚೂರು ಏನಾದರೂ ಕೈಬಿಟ್ಟೆವೆಂದರೆ ಹೈ ಕೋರ್ಟಿನವರು ನಾವು ಶಿಕ್ಷೆ ಹಾಕಿದ್ದು ತಪ್ಪು ಎಂದು ಹೇಳಿಬಿಡುತ್ತಾರೆ. ಹೀಗಾಗಿ ನಾವು ಶಿಕ್ಷೆ ಹಾಕಿದ ಎಷ್ಟೊ ಕೇಸುಗಳು ಕೋರ್ಟಿನಲ್ಲಿ ವಜಾ ಆಗಿವೆ. ಆದುದರಿಂದ ಈ ಲಂಚವನ್ನು ತಡೆಗಟ್ಟತಕ್ಕ ಕೆಲಸ ಬಹಳ ಕಷ್ಟವಾದುದ್ದು. ಇದನ್ನು ಸರಿಯಾಗಿ ತಿಳಿದುಕೊಳ್ಳದೆ ನಿಮ್ಮ ಆಡಳಿತ ಕೆಟ್ಟಿದೆ, ನೀವು ಅಧಿಕಾರ ಬಿಟ್ಟು ಕೆಳಗೆ ಇಳಿಯಬೇಕು ಎಂದರೆ ಅದೇನು ಮಾತು? ಆದರೆ ಈ ವಿಚಾರದಲ್ಲಿ ನಾನು ತಮ್ಮಲ್ಲಿ ಕೇಳಿ ಕೊಳ್ಳುವುದಿಷ್ಟೆ: ಅಂಥ ಅನಾಚಾರ ಎಲ್ಲೆಲ್ಲಿದೆಯೋ ಅದನ್ನು ನಿರ್ಮೂಲ ಮಾಡಲು ನಿಮ್ಮ ಸಹಕಾರ ನಮಗೆ ಬಹಳ ಅಗತ್ಯವಾಗಿದೆ. ನೀವೂ ನಾವೂ ಇಬ್ಬರೂ ಸೇರಿ ಮಾಡುವಂಥ ಕೆಲಸ ಇದು. ಇದರಲ್ಲಿ ನಮಗೆ ಶ್ರೀ ಗೋಪಾಲ ಗೌಡರ ಸಹಕಾರವೂ ಬೇಕು. ಸಮಾಜದಲ್ಲಿರತಕ್ಕ ದುರ್ಗುಣಗಳನ್ನು ಅಳಿಸಬೇಕಾಗಿದ್ದರೆ ಅದಕ್ಕಾಗಿ ಎಲ್ಲರೂ ದುಡಿಯಬೇಕು.

ಇನ್ನು ಕೆಲವರು ಆಹಾರದ ಬೆಲೆಗಳು ಬಹಳವಾಗಿ ಏರಿರುತ್ತವೆ ಎಂದು ಹೇಳಿದ್ದಾರೆ. ಹೋದ ಸಾರಿ ತಂದಿದ್ದ ನಿರ್ಣಯದಲ್ಲೂ ಇದೇ ವಿಚಾರ ಇತ್ತು. ಆದರೆ ಇದರಲ್ಲಿ ಈ ಸಾರಿ ಇವರು ಒಂದು ಬುದ್ಧಿವಂತಿಕೆಯನ್ನು ಮಾಡಿದ್ದಾರೆ. ನೀವೂ ಬಹಳ ಬುದ್ಧಿವಂತರೇ. ಹೀಗೆ ಒಂದು ಬದಲಾವಣೆ ಮಾಡದಿದ್ದರೆ ಅಧ್ಯಕ್ಷರು ಈ ಸೂಚನೆಯನ್ನು ಅಲೋಮಾಡುವುದಿಲ್ಲ ಎಂದೋ ಏನೋ.

ನಿಮಗೆ ಒಳ್ಳೆಯ ಮಾತು ಹೇಳಿದ ಹಾಗಾಯಿತು. ಬುದ್ಧಿವಂತರು, ಒಳ್ಳೆಯವರ ಮಾತು ಕೇಳಿ ಎಂದು ಆಯಿತು. ಸುಮ್ಮನೆ ಬಯ್ಯುವುದು ಬಿಟ್ಟರೆ ಒಳ್ಳೆಯವರಾಗುತ್ತೀರ, ನೀವೆಲ್ಲರೂ ಒಳ್ಳೆಯವರೆ ಎಂದು ಹೇಳುತ್ತೇನೆ.

ಆಹಾರದ ವಿಷಯವನ್ನು ಹೇಳಿದರು. ಇವತ್ತು ಜನ ಎಷ್ಟು ಆಹಾರ ತಿನ್ನುತಿದ್ದಾರೆ, 15 ವರ್ಷಗಳ ಕೆಳಗೆ ಎಷ್ಟು ತಿನ್ನುತ್ತಾ ಇದ್ದರು ಎಂದು ಯಾರಾದರೂ ಲೆಕ್ಕ ಹಾಕಿದ್ದೀರ? ಹಿಂದೆ 11, 12 ಔನ್ಸು ತಿನ್ನುತಿದ್ದರು; ಇವತ್ತಿನ ದಿವಸ 15-16 ಔನ್ಸು ತಿನ್ನುತ್ತಾ ಇದ್ದಾರೆ. ಇದನ್ನು ಹೆಚ್ಚು ಆಹಾರ ಬೆಳೆಯದೆ ತಿನ್ನುತ್ತಾ ಇದ್ದಾರೆಯೇ? ಆದರೆ ಇದೂ ಸಾಲದು, 20 ಔನ್ಸಾದರೂ ತಿನ್ನಬೇಕು. ಅಷ್ಟು ಬೆಳೆಯುವುದಕ್ಕೆ ಸಾಧ್ಯವಾಗಿಲ್ಲ, ಅದನ್ನು ಬೆಳೆಯಬೇಕು. ಅದನ್ನು ಬೆಳೆಯಬೇಕಾದರೆ, ನಮ್ಮ ಮಾನ್ಯ ಶಿವಪ್ಪನವರು ಹೇಳುತ್ತಿರುವ ಹಾಗೆ ಅಪಾರವಾದ ಹಣ ಖರ್ಚು ಮಾಡಬೇಕು. ಅದಕ್ಕೆ ಯೋಜನೆಗಳನ್ನು ಮಾಡುತ್ತಾ ಇದ್ದೇವೆ. ಸಾಕಷ್ಟು ಯೋಜನೆಗಳು ನಡೆಯುತ್ತಲೂ ಇವೆ. ಆದರೆ ನೀವು ಏನು ಮಾಡಿದಿರಿ ಎಂದು ವಿರೋಧ ಪಕ್ಷದವರು ಕೇಳುತ್ತಾರೆ. ಅಪ್ಪಾ,ಮೈಸೂರಿನಲ್ಲಿ ತುಂಗಭದ್ರ, ಭದ್ರ, ತುಂಗ, ಘಟಪ್ರಭ ಕಟ್ಟಿದ್ದೇವೆ, ಮಲಪ್ರಭಾಗೆ ಫೌಂಡೇಷನ್ ಹಾಕಿದ್ದೇವೆ, ಅಪ್ಪರ್ ಕೃಷ್ಣಾಗೆ ಫೌಂಡೇರ್ಷ ಹಾಕುತ್ತೇವೆ, ಹೇಮಾವತಿ ಮತ್ತು ಹಾರಂಗೀಗೂ ಕಟ್ಟುತ್ತೇವೆ. ನೀವು ಇವುಗಳನ್ನು ಕಟ್ಟಿದರೆ ಏನಾಯಿತು ಎಂದು ಕೇಳುತ್ತಾರೆ. ಜನಗಳಿಗೆ ಅನುಕೂಲವಾಯಿತು ಎಂದು ಹೇಳುತ್ತೇವೆ. ಸ್ವಲ್ಪ ತಡವಾಗಿದೆ. ಈ 10 ವರ್ಷಗಳಲ್ಲಿ ಜಾಸ್ತಿ ಕೆಲಸವಾಗಿಲ್ಲವೆಂದು ಮೂರುವರೆ ಕೋಟಿ ರೂಪಾಯಿಗಳನ್ನು ರೈತರ ಭೂಮಿಗೆ ನೀರನ್ನು ತೆಗೆದುಕೊಂಡು ಹೋಗಿ ಬಿಡಲು ಮಂಜೂರು ಮಾಡಿದ್ದೇವೆ. ರೈತನಿಗೇ ಬಿಟ್ಟರೆ ಅವನು ಕಾಲುವೆಗಳನ್ನು ತೆಗೆದು ನೀರನ್ನು ಹೊಲಗಳಿಗೆ ತೆಗೆದುಕೊಳ್ಳುವುದಿಲ್ಲ. ಆದ್ದರಿಂದ ಸರ್ಕಾರವೇ ಗದ್ದೆಯ ನೀರ್ಗಾಲುವೆಗಳನ್ನು ಏರ್ಪಡಿಸಲು ಹಣವನ್ನು ಒದಗಿಸಿದೆ.

ನಾವೇ ಮಾಡಿಸುತ್ತೇವೆ. ಸಂತೋಷವಾಯಿತೋ? ಟ್ರಾಕ್ಟರುಗಳನ್ನು ತರಿಸಬೇಕೆಂದು ಮಾಡಿದ್ದೇವೆ. ಪಾಪ! ಏನು ಮಾಡಿದರೂ ಅನುಮಾನ ಇರುವವರಿಗೆ ಏನು ಮಾಡೋಣ? ಅನುಮಾನ ಇರತಕ್ಕಂಥವರ ಸಂಸಾರ ಚೆನ್ನಾಗಿ ನಡೆಯುವುದಿಲ್ಲ. ನಿಮ್ಮ ಪಾರ್ಟಿ ಸಂಸಾರವನ್ನೂ ಚೆನ್ನಾಗಿ ನಡೆಸಿಕೊಳ್ಳಲಾರಿರಿ. 'ಸಂಶಯಾತ್ಮಾ ವಿನಶ್ಯತಿ' ಎಂದು ಹೇಳಿದ

ಹಾಗೆ ಆಗುತ್ತದೆ. ಇದನ್ನು ಏರ್ಪಾಡು ಮಾಡಲು ಮೂರುವರೆ ಕೋಟಿ ರೂಪಾಯಿ ಖರ್ಚ ಮಾಡುತ್ತೇವೆ. ಅದಕ್ಕೋಸ್ಕರ ಲೆವಲರುಗಳು ಮುಂತಾದ ಮೆಷಿನರಿಗಳು, ಮಣ್ಣು ತೆಗೆಯುವ ಯಂತ್ರಗಳು, ವಗೈರೆಗೆ, ಸುಮಾರು 30 ಲಕ್ಷರೂಪಾಯಿ ಖರ್ಚಿನಲ್ಲಿ ಆರ್ಡರ್ ಮಾಡಿದ್ದೇವೆ. ಅವು ಬೇಗ ಬರಬಹುದು, ಆದಷ್ಟು ಜಾಗ್ರತೆ ಮಾಡಿಕೊಡುತ್ತೇವೆ. ಭದ್ರ ಕೆನಾಲಿನಿಂದಲೇ ಇನ್ನು ಒಂದು ವರ್ಷದೊಳಗೆ 2 ಲಕ್ಷ ಎಕರೆಯಲ್ಲಿ ಬೆಳೆ ಬೆಳೆಯುವಂಥ ಕಾಲ ಬರುತ್ತದೆ. ಬಳ್ಳಾರಿಯಲ್ಲಿ ಕೂಡ 80 ಸಾವಿರ ಎಕರೆ ಸಾಗುವಳಿಗೆ ಬಂದಿದೆ; ರಾಯಚೂರಿನಲ್ಲಿ ಒಂದುವರೆ ಲಕ್ಷ ಎಕರೆ ಸಾಗುವಳಿಗೆ ಬಂದಿದೆ. ಇನ್ನೂ 6-7-ಲಕ್ಷ ಎಕರೆ ಬರಬಹುದು. ಬಿಜಾಪುರದಲ್ಲಿಯೂ ಭಾರಿ ಕೆಲಸ ಮಾಡುತ್ತಿದ್ದೇವೆ. ಇದು ಕಷ್ಟವಾದ ಕೆಲಸ. ತಡವಾಗಿದ್ದರೂ ಬಹಳ ಕೆಲಸವನ್ನು ಹೆಚ್ಚು ಬೆಳೆ ಬೆಳೆಯುವುದಕ್ಕೆ ಮಾಡಿದ್ದೇವೆ. ಮೈಸೂರಿನ ಪೂರ್ವ ಭಾಗದಲ್ಲಿ ಅನೇಕ ತಾಲ್ಲೂಕುಗಳಲ್ಲಿ ನೂರಾರು ಕೆರೆಗಳನ್ನು ಮಾಡುತ್ತಾ ಇದ್ದೇವೆ. ಜನಗಳೂ ಹಾಗೆ ಕೇಳಬೇಕು, ನಾವೂ ಮಾಡಿಕೊಡುತ್ತೇವೆ. ನಾವು ಮಾಡಿರುವ ಕೆಲಸವನ್ನು ಜನ ಸಾಕಷ್ಟು ಒಪ್ಪಿದ್ದಾರೆ. ಯೋಜನೆಯಂತೆ ಕೆಲಸ ನಡೆಯುತ್ತಾ ಇದೆ. ಮೂರನೆಯ ಯೋಜನೆಯಲ್ಲಿ 22 ಸಾವಿರ ಬಾವಿಗಳನ್ನು ತೆಗೆಯಬೇಕೆಂದಿದ್ದೇವೆ. ಇನ್ನು ನಾಲ್ಕು ವರ್ಷಗಳೊಳಗೆ 50 ಸಾವಿರ ಬಾವಿಗಳಿಗೆ ಪಂಪುಸೆಟ್ಟುಗಳನ್ನು ಕೊಡಬೇಕೆಂದು ಮನಸ್ಸು ಮಾಡಿದ್ದೇವೆ. ಇವುಗಳನ್ನು ಎನ್‌ಕಂಬ್ರೆನ್ಸ್ ಸರ್ಟಿಫಿಕೇಟ್ ಇಲ್ಲದೇನೇ ಕೊಡಬೇಕು ಎಂದು ಮಾಡಿದ್ದೇವೆ. ಆದಷ್ಟು ಜಾಗ್ರತೆ ಸಣ್ಣ ನೀರಾವರಿ ಯೋಜನೆಗಳನ್ನು ಪೂರೈಸಲು ಕೋಟ್ಯಾಂತರ ರೂಪಾಯಿಗಳನ್ನು ಖರ್ಚು ಮಾಡುತ್ತಾ ಇದ್ದೇವೆ. ಇಷ್ಟು ಖರ್ಚು ಮಾಡುವಾಗ ಒಂದು ವೇಳೆ ಲಂಚ ತಿಂದುಬಿಟ್ಟರೆ ಎಂದು ವಿರೋಧ ಪಕ್ಷದ ಸಂಶಯ. ದರ್ಜಿಗೆ 10 ಗಜ ಬಟ್ಟೆ ಕೊಟ್ಟಾಗ ಕಾಲು ಗಜ ಕದಿಯುತ್ತಾನೆಂದು ಬಟ್ಟೆ ಹೊಲಿಸುವುದನ್ನೇ ಬಿಡುವುದಕ್ಕೆ ಆಗುತ್ತದೋ? ಮಾಡುವ ಕೆಲಸವನ್ನು ಮಾಡಿಯೇ ಮಾಡಬೇಕು. ಎಲ್ಲಿ ಬಾವಿಗೆ ಅವಶ್ಯಕತೆ ಇದೆಯೋ ಅಲ್ಲಿ ತೋಡಿಸಲೇಬೇಕು. ಎಲ್ಲಿ ಕೆರೆಗೆ ಅವಶ್ಯಕತೆ ಇದೆಯೋ ಅಲ್ಲಿ ಕಟ್ಟಿಸಲೇಬೇಕು. ಬಟ್ಟೆ ಹೊಲಿಸಿಕೊಂಡು ಮಕ್ಕಳೂ, ನಾವೂ ತೊಡಲೇಬೇಕು. ಕಾಲು ಗಜ ದರ್ಜಿ ಕದಿಯುತ್ತಾನೆಂದು ಬಟ್ಟೆ ಹೊಲಿಸುವುದನ್ನೇ ಬಿಡುತ್ತೇವೆಯೆ? ಕಂಟ್ರಾಕ್ಟರುಗಳೂ, ಇಂಜಿನಿಯರುಗಳು ಸ್ವಲ್ಪ ತಿನ್ನಬಹುದು, ಆದರೆ ನೀವು ಹೇಳಿದಷ್ಟು ಇಲ್ಲ. ನೀವು ಈ ರೀತಿ ಹೇಳದೆ ಇದ್ದರೆ ನಿಮಗೆ ಸಮಾಧಾನ ಇರುವುದಿಲ್ಲ.

ಜನ ಜಾಸ್ತಿ ಆಹಾರ ತಿನ್ನುತ್ತಾ ಇದ್ದಾರೆ ಅನ್ನುವುದಕ್ಕೆ ಏನು ಗುರುತು? ನಮ್ಮ ಜನದ ಬದುಕುವ ಕಾಲ (ಸ್ಪಾನ್ ಆಫ್ ಲೈಫ್ ಅಥವಾ ಲಾಂಗೆವಿಟಿ) ಈ ಸುಮಾರು 16-17 ವರ್ಷಗಳಲ್ಲಿ 26 ವರ್ಷದಿಂದ 42 ವರ್ಷಕ್ಕೆ ಬಂದಿದೆ. ಪೋಲೆಂಡ್ ಮತ್ತು ಸ್ಕಾಂಡಿನೇವಿಯನ್ ದೇಶಗಳಲ್ಲಿ ಸ್ಪಾನ್ ಆಫ್ ಲೈಫ್ 60-65 ವರ್ಷವಿದೆ. ಆದರೂ ನಮ್ಮಲ್ಲಿ 26 ರಿಂದ 42ಕ್ಕೆ ಏರಿಸುವುದು ಮಂತ್ರದಿಂದ ಆಗುತ್ತದೆಯೆ? ಅದು ಏನು ತೋರಿಸುತ್ತದೆ: ಜನಗಳಿಗೆ ಸಾಕಷ್ಟು ಆಹಾರ ಸಿಕ್ಕುತ್ತಾ ಇದೆ, ಮೈಗೆ ಬಟ್ಟೆ ಸಿಕ್ಕುತ್ತಾ ಇದೆ. ಬಟ್ಟೆ ಉತ್ಪತ್ತಿಯೂ ಜಾಸ್ತಿಯಾಗಿದೆ. ನಮ್ಮ ದೇಶದಿಂದ ಹೊರಗಡೆ ಬಟ್ಟೆ ಕಳುಹಿಸುತ್ತಾ ಇದ್ದೇವೆ. ಆದೂ

ಅಲ್ಲದೆ ನಮ್ಮ ಜನ ತಲಾ ಒಂದಕ್ಕೆ 16-17 ಗಜ ಬಟ್ಟೆ ಉಪಯೋಗಿಸುತ್ತಾರೆ.

ಬಟ್ಟೆ ಬೆಲೆ ಜಾಸ್ತಿ ಇಲ್ಲದಿದ್ದರೆ, ಹತ್ತಿ ಬೆಳೆಯುವವನ ಗತಿ ಏನು, ಕೂಲಿ ತೆಗೆದುಕೊಳ್ಳುವವನ ಗತಿ ಏನು ? ರೈತನ ಗತಿ ಏನು? ಬೆಲೆ ಕಡಿಮೆ ಮಾಡುವುದಕ್ಕೆ ನಾನು ಸಿದ್ದನಿಲ್ಲ. ಬೆಲೆ ಜಾಸ್ತಿಯಾಗಿರುವುದನ್ನು ಆಲೋಚನೆ ಮಾಡುತ್ತಾ ಇದ್ದೇವೆ. ಹೋದ ಸಲ ಆಹಾರ ಉತ್ಪತ್ತಿ ಜಾಸ್ತಿಯಾಗಿಲ್ಲ ಎಂದು ಹೇಳುವಾಗ ಏನು ಹೇಳಿದ್ದರೋ, ಅದನ್ನೇ ಇವತ್ತೂ ಹೇಳುತ್ತಾ ಇದ್ದಾರೆ. ಮಾನ್ಯ ರೆವಿನ್ಯೂ ಮಂತ್ರಿಗಳಾದ ಕೃಷ್ಣಪ್ಪನವರು ಹೋದ ವರ್ಷ ಎಷ್ಟಿತ್ತು, ಈ ವರ್ಷ ಎಷ್ಟಿದೆಯೆಂದು ಹೇಳಿದ್ದಾರೆ. ಬೆಲೆ ಜಾಸ್ತಿಯಾಗುವುದಕ್ಕೆ ಒಂದು ಕಾರಣ ಮಧ್ಯವರ್ತಿಗಳು ಮತ್ತು ವ್ಯಾಪಾರಿಗಳು ಹೋಲ್‌ಸೇಲಿನಲ್ಲಿ ರೀಟೇಲರುಗಳಿಗೆ ಮಾರತಕ್ಕಂಥ ಮರ್ಚೆಂಟುಗಳು ಬಹಳ ಕಾರಣರಾಗಿರುತ್ತಾರೆ. ಆದ್ದರಿಂದ ಈ ಪದ್ಧತಿಯನ್ನು ತೆಗೆದು ಕೊ-ಆಪರೇಟೀವ್ ಸೊಸೈಟಿಗಳ ಮೂಲಕ ವ್ಯವಹಾರಗಳನ್ನು ನಡೆಸಿದರೆ ಚೆನ್ನಾಗಿ ನಡೆಯುತ್ತದೆ. ಈ ಸೊಸೈಟಿಗಳನ್ನು ಷುರು ಮಾಡಿ, ಸತ್ಯವಂತರು, ಯೋಗ್ಯರು, ದಕ್ಷತೆಯಿಂದ ಸಮಸ್ತವನ್ನೂ ನೋಡಿದರೆ, ಪ್ರಾಮಾಣಿಕ ಕೆಲಸವಾಗುತ್ತದೆ. ಹೋದ ವರ್ಷ ಬತ್ತದ ಬೆಳೆಯಲ್ಲಿ ರೈತನಿಗೆ ಎಲ್ಲೆಲ್ಲಿ ಅನ್ಯಾಯವಾಗಿತ್ತೊ, ಅಲ್ಲಿ ನಾವು ಪ್ರವೇಶ ಮಾಡಿ 2-3 ರೂಪಾಯಿ ಜಾಸ್ತಿ ಬೆಲೆ ಅವನಿಗೆ ಬರುವ ಹಾಗೆ ಮಾಡಿದೆವು ಈ ಮಧ್ಯವರ್ತಿ ಜನಗಳೇನಿದ್ದಾರೆ ಅವರು ಬಾರದ ರೀತಿಯಲ್ಲಿ ಈ ಸೊಸೈಟಿಗಳನ್ನು ಮಾಡುತ್ತೇವೆ. ವೈಯಕ್ತಿಕವಾಗಿ, ಹೇಳುವುದಾದರೆ, ನಾವು ಉತ್ಪತ್ತಿ ಮಾಡುವವರಿಗೆ ಏನಾದರೂ ಸ್ವಲ್ಪ ಅಲೋಯನ್ಸು ವಗೈರೆ ಕೊಟ್ಟು ಅವರ ಜೀವನವನ್ನು ಸುಗಮವಾಗಿ ಮಾಡಬೇಕು. ಧಾರಣೆವಾಸಿ ಏರಿದೆ ಎಂದು ಕಡಮೆ ಮಾಡಿ ರೈತನಿಗೆ ತೊಂದರೆ ಮಾಡಿದರೆ, ಅವನ ಗತಿ ಏನು? ನಮ್ಮ ಉತ್ಪತ್ತಿಯಲ್ಲಿ ಶೇಕಡ 55ರಷ್ಟು ರೈತ ಉತ್ಪತ್ತಿ ಮಾಡುತ್ತಾನೆ. ಒಟ್ಟು ರಾಷ್ಟ್ರೀಯ ವರಮಾನವನ್ನು, ಶೇಕಡ 65ರಷ್ಟು ಅವನು ಕೊಡುಗೆ, ನೀಡುತ್ತಾನೆ. ಶೇಕಡ 15ರಷ್ಟು ಕಚ್ಚಾಮಾಲನ್ನು ಅವನು ಬೆಳೆಯುತ್ತಾನೆ. ಆದ್ದರಿಂದ ಅವರಿಗೆ ತೊಂದರೆಯಾಗಬಾರದು. ಬಟ್ಟೆ ಬೆಲೆ ಜಾಸ್ತಿ ಎಂದು ನನಗೆ ಕಂಡಿಲ್ಲ. ನ್ಯಾಯವಾದಂಥ ಸೂಚನೆಯನ್ನು ಮಾಡಿದರೆ ಸರ್ಕಾರ ಒಪ್ಪಿಕೊಳ್ಳಬಹುದು. ಒಂದು ಹಂತದಲ್ಲಿ ನಿವಾರಣೆ ಮಾಡಿ ಎಂದು ಹೇಳುವುದರಲ್ಲಿ ಸ್ವಲ್ಪ ಸರಿ ಕಾಣಬಹುದು.

ಪಾನ ನಿರೋಧ ವಿಷಯವನ್ನು ಹೇಳಿದರು. ಅದು ಯಶಸ್ವಿಯಾಗಿದೆ ಎಂದು ನಾವು ಹೇಳುತ್ತೇವೆಯೆ? ಶ್ರೀರಾಮರಾಯರು ಹೇಳುತ್ತಾರೆಯೆ? ನೀವು ಹೇಳುತ್ತೀರಾ? ಯಾರಾದರೂ ಹೇಳುತ್ತಾರೆಯೆ? ಅದು ಯಶಸ್ವಿಯಾಗಿಲ್ಲ. ಆದ್ದರಿಂದ ಏನು ಮಾಡಬೇಕು? ದೇವರು ಬಂದು ನಡೆಸಿದರೂ ಯಶಸ್ವಿಯಾಗಲಿಕ್ಕೆ ಕಷ್ಟವಿದೆ. ಪ್ರಯತ್ನ ಮಾಡುತ್ತಾ ಇದ್ದೇವೆ. ಅದೊಂದು ಪ್ರಯೋಗ ಕೆಲವು ಕಡೆ ಯಶಸ್ವಿಯಾಗಿದೆ. ನಾವೂ ನೀವೂ ಎಷ್ಟು ಅಪೇಕ್ಷೆ ಮಾಡುತ್ತೇವೆಯೋ ಅಷ್ಟು ಯಶಸ್ವಿಯಾಗಿಲ್ಲ.

ನಮ್ಮ ರಾಜ್ಯಕ್ಕೆ ಹೊಸ ರೈಲ್ವೆಗಳು ಯಾವುದೂ ಬರಲಿಲ್ಲ ಎಂಬುದು ಮಾನ್ಯ ಸದಸ್ಯರ ದೂರಾಗಿದೆ. ಅದು ನಮ್ಮ ಕೈಯಲ್ಲಿದ್ದರೆ ಮಾಡುತ್ತಿದ್ದೆವು. ಆಹಾರ ಧಾನ್ಯಗಳ ಹತೋಟಿ, ಧಾರಣೆವಾಸಿಗಳ ಹತೋಟಿ, ಇವುಗಳನ್ನೆಲ್ಲ ಮಾಡುವವರು ಯಾರು? ನಮ್ಮ ರಾಜ್ಯದಲ್ಲಿ ರೈಲ್ವೆಗಳಾಗಬೇಕೆಂದು 40 ವರ್ಷಗಳಿಂದಲೂ ಪ್ರಯತ್ನ ಮಾಡುತ್ತಿದ್ದೇವೆ. ಸರ್ ಎಂ. ವಿಶ್ವೇಶ್ವರಯ್ಯನವರು ಭಟ್ಕಲ್ ಬಳಿ ಹಡಗು ಕಟ್ಟುತ್ತೇವೆ, ಅಲ್ಲಿಯವರೆಗೂ ರೈಲ್ವೆ ಮಾರ್ಗವನ್ನು ವಿಸ್ತರಿಸಬೇಕು, ಎಂದು ಪ್ರಯತ್ನ ಮಾಡಿದರು. ಆಗಲಿಲ್ಲ. ಆಗಿನ ಕಾಲದಿಂದಲೂ ಈ ವಿಚಾರವಿದೆ. ಒಂದು ಸಂತೋಷವೆಂದರೆ, ನಮ್ಮ ಕಾಲದಲ್ಲಿ ತೀರ್ಮಾನವಾಗಿ ಎಲ್ಲ ಅಳತೆಗಳಾಗುತ್ತಿವೆ. ಇಂಥಿಂಥ ಕಡೆ ರೈಲು ಮಾರ್ಗವನ್ನು ಹಾಕಬೇಕೆಂದು ಜಮೀನು ಅಕ್ವೈರ್ ಮಾಡುವುದಕ್ಕೆ ಪ್ರೊಸೀಡಿಂಗ್ಸ್ ಕೆಲಸ ನಡೆಯುತ್ತಿದೆ. ಇದಕ್ಕೆ ಸಂತೋಷಪಡಬೇಕೋ ಅಥವಾ ಬಯ್ಯಬೇಕೋ ಅದನ್ನು ನಿಮಗೇ ಬಿಡುತ್ತೇನೆ. ಬೆಂಗಳೂರು-ಸೇಲಂ ಮಾರ್ಗ ಆಗುತ್ತಿದೆ. ಹಾಗೆಯೇ ಹಾಸನ-ಮಂಗಳೂರು ಮಾರ್ಗವೂ ಆಗುತ್ತದೆ. ಬಾಕಿ ಮಾರ್ಗಗಳೂ ಆಗುತ್ತವೆ.

ಭೂಸುಧಾರಣೆಯ ವಿಷಯವನ್ನು ಸಂಬಂಧಪಟ್ಟ ಮಂತ್ರಿಗಳು ಹೇಳಿದ್ದಾರೆ.

ಮಂತ್ರಿಮಂಡಲದ ಗಾತ್ರದ ವಿಚಾರವನ್ನು ಪ್ರಸ್ತಾಪ ಮಾಡಿದ್ದಾರೆ. ಅದಕ್ಕೆ ಜವಾಬು ಕೊಡುವುದಕ್ಕೆ ಹೋಗುವುದಿಲ್ಲ. ಆ ಬಗ್ಗೆ ನಾನು ಹೇಳಿದ್ದೇನೆ. ಮೊದಲನೆ ಸಲ ಕೇಳುವುದಕ್ಕೆ ಚೆನ್ನಾಗಿರುತ್ತದೆ. ಹೇಳಿದ್ದನ್ನೇ ಹೇಳುವುದು ಚೆನ್ನಾಗಿರುವುದಿಲ್ಲ. 'ದುಗ್ಗಾಣಿ ಕೊಡುತ್ತೇನೆ ಹಾಡೋ ದಾಸಯ್ಯ, ದುಡ್ಡು ಕೊಡುತ್ತೇನೆ ಬಿಡೋ ದಾಸಯ್ಯ' ಎಂದು ಹೇಳುವ ಹಾಗೆ ಆಗುತ್ತದೆ. ಹೀಗಾಗಬಾರದು. ಹೇಳುವುದನ್ನು ಹೇಳಿದ್ದಾಯಿತು, ಪುನಃ ಕೇಳುವುದರಿಂದ ಏನೂ ಪ್ರಯೋಜನವಾಗುವುದಿಲ್ಲ.

ಶರಾವತಿ ವಿಷಯದಲ್ಲಿ ಅನೇಕ ತರಹ ದೂರುಗಳು ಬರುತ್ತಿವೆ. ಇದಕ್ಕೆ ಸಂಬಂಧಪಟ್ಟ ಫೈಲುಗಳು ಕೆಲವು ದಿನಗಳ ಹಿಂದೆ ನನಗೆ ಸಿಕ್ಕಿವೆ. ಇದನ್ನು ಪರಿಶೀಲಿಸುವುದು ಅಷ್ಟು ಸುಲಭವಲ್ಲ. ಆರೇಳು ವರ್ಷಗಳ ದಾಖಲೆ ಇದೆ. ಅನೇಕ ಕಂಟ್ರಾಕ್ಟ್ ಫಾರಂಗಳಿವೆ, ಅನೇಕ ಸರ್ಕಾರಿ ಆದೇಶಗಳಿವೆ, ಮಂತ್ರಿಮಂಡಲದ ತೀರ್ಮಾನಗಳಿವೆ. ಈ ಕೆಲಸಕ್ಕೆ ಸಂಬಂಧಪಟ್ಟಂತೆ ಇಂಜಿನಿಯರುಗಳಿದ್ದಾರೆ, ಸೆಂಟ್ರಲ್ ವಾಟರ್ ಅಂಡ್ ಪವರ್ ಕಮಿಷನ್ ಇದೆ ಕೆಲಸದ ವಿನ್ಯಾಸಗಳನ್ನು ಆಗಾಗ್ಗೆ ಬದಲಾಯಿಸುತ್ತಿರುತ್ತಾರೆ. ಮೊದಲು ಕಲ್ಲಿನ ಕಟ್ಟಡ ಎಂದು ಇದ್ದುದನ್ನು ಮಣ್ಣಿನ ಕಟ್ಟೆ ಸಾಕು ಎಂದು ಹೇಳಿದರು, ಈ ಕಷ್ಟ ಬಂದಿದೆ. ಇದರಿಂದ ಅನೇಕ ವಿಚಾರಗಳು ಬದಲಾಗುತ್ತವೆ. ಮಣ್ಣಿನ ಕಟ್ಟೆಯನ್ನು ಹಾಕುವಾಗ upstream rockfill ನಂತೆಯೆ down stream rockfill ಮಾಡಬೇಕು ಎಂದು ಹೇಳಿದರು. ಪಕ್ಕದಲ್ಲಿರತಕ್ಕ ಗುಡ್ಡವನ್ನು ಹಾಗೆಯೇ ಬಿಟ್ಟರೆ ಅದರಿಂದ ಮುಂದೆ ತೊಂದರೆಯಾಗಬಹುದು ಎಂದು ಗುಡ್ಡಕ್ಕೆ ಕಲ್ಲು ಹೊದೆಸಬೇಕು ಎಂದು ಹೇಳುತ್ತಾರೆ. ಏಕೆಂದರೆ ಅಪಾರವಾದ ನೀರು

ನಿಲ್ಲತಕ್ಕ ಸಂದರ್ಭದಲ್ಲಿ ಎಲ್ಲಿಯಾದರೂ, ಎಳ್ಳಷ್ಟಾದರೂ ಅದು ಸರಿಯಿಲ್ಲದೆ ಹೋದರೆ, ನೀರು ಲೀಕ್ ಆದರೆ ಜನಗಳ ಗತಿ ಏನು, ಎಷ್ಟು ನಷ್ಟವಾಗುತ್ತದೆ, 100 ಕೋಟಿ ರೂಪಾಯಿಗಳು. ನೀವು ಹೇಳತಕ್ಕದ್ದು ಅಲ್ಲಿ ಬಹಳ ದುರುಪಯೋಗ ಮಾಡಿದ್ದಾರೆ ಎಂದು. ಎಲ್ಲ ಲೆಕ್ಕ ಹಾಕಿದರೂ ಕೂಡ 40 ಲಕ್ಷ ಆದೀತು, ಪ್ರಾಯಶಃ 50 ಲಕ್ಷ ಎಂದು ಇಟ್ಟುಕೊಳ್ಳಬಹುದು. ಇದನ್ನು ನಾನು ನೋಡುತ್ತಿದ್ದೇನೆ. ನೀವುಗಳು ಹೇಳಿಬಿಟ್ಟ ಕೂಡಲೇ ಎಲ್ಲ ಆಗುವುದಿಲ್ಲ. ಎತ್ತು ಈಯಿತು ಎಂದರೆ ಕೊಟ್ಟಿಗೆಗೆ ಕಟ್ಟುವುದಕ್ಕಾಗುವುದಿಲ್ಲ. ಮಾನ್ಯ ಸದಸ್ಯರು ಅವರೇ ಇದನ್ನು ಖುದ್ದು ನೋಡುವುದಿಲ್ಲ. ಹೇಳಿಕೊಟ್ಟ ಮಾತು, ಕಟ್ಟಿಕೊಟ್ಟ ಬುತ್ತಿ ಎನ್ನುವಂತೆ. ಯಾರೋ ಹೇಳುತ್ತಾರೆ ಎಂದು ಇಲ್ಲಿ ಬಂದು ಕೇಳುತ್ತಾರೆ. ಯಾರಾದರೂ ಬಂದು ನನ್ನ ಹತ್ತಿರ ಕೇಳಿದರೆ ನಾನು ಹೇಳುತ್ತೇನೆ. ನಾನೂ ಮೊದಲೇ ಹೇಳಿದ ಹಾಗೆ ಎಲ್ಲ ಸಂದರ್ಭಗಳಲ್ಲಿಯು ಮಂತ್ರಿ ಮಂಡಲದ ತೀರ್ಮಾನಗಳಿವೆ, ಬೋರ್ಡಿನ ತೀರ್ಮಾನಗಳಿವೆ, ಕೇಂದ್ರ ಸರ್ಕಾರದಿಂದಲೂ ಹೀಗೆಯೇ ಮಾಡಬೇಕು ಎಂದು ತಿಳಿಸುತ್ತಾರೆ. ಆದುದರಿಂದ ಕೆಲವು ಸಂಬಂಧದಲ್ಲಿ ಕೊಡತಕ್ಕ ರೇಟುಗಳನ್ನು ಜಾಸ್ತಿ ಮಾಡಬೇಕಾದರೆ ಸರ್ಕಾರದ ನ್ಯಾಯ ಶಾಖೆಯನ್ನು ಮತ್ತು ಅಡ್ವೊಕೇಟ್ ಜನರಲ್ ಅವರನ್ನೂ ಕೇಳಿ ತೀರ್ಮಾನ ಮಾಡಿದ್ದೇವೆ. ಕ್ಷುಲ್ಲಕ ಆರೋಪಣೆಗಳನ್ನು ಮಾಡುವುದರಿಂದ ಪ್ರಯೋಜನವಾಗುವುದಿಲ್ಲ. ನಾನು ಶರಾವತಿಗೆ ಸಂಬಂಧಪಟ್ಟ ಫೈಲುಗಳನ್ನೆಲ್ಲ ನೋಡುತ್ತಿದ್ದೇನೆ. ಹಾಕಿರುವ ರೇಟುಗಳನ್ನು ಬದಲಾವಣೆ ಮಾಡುವುದಕ್ಕೆ ಬರುವುದಿಲ್ಲ, ಕೊಟ್ಟ ದುಡ್ಡಿಗೆ ಲೆಕ್ಕವಿದೆ ಎಷ್ಟೆಷ್ಟು ದುಡ್ಡು ಕೊಟ್ಟಿದ್ದೇವೆ, ಯಾವ ತಾರೀಖು, ಯಾವ ಕಾಲ ಎಲ್ಲ ಇದೆ. ಇದನ್ನೆಲ್ಲ ಬದಲಾವಣೆ ಮಾಡುವುದಕ್ಕಾಗುವುದಿಲ್ಲ. ಆಗಿರತಕ್ಕ ಮಂತ್ರಿಮಂಡಲದ ತೀರ್ಮಾನಗಳಿವೆ, ಇತರ ತೀರ್ಮಾನಗಳೂ ಇವೆ. ಅವುಗಳನ್ನೆಲ್ಲ ಬದಲಾವಣೆ ಮಾಡುವುದಕ್ಕಾಗುವುದಿಲ್ಲ. ಅನ್ಯಾಯವೇನಾದರೂ ನಡೆದಿದೆಯೆ ಅಲ್ಲೋಲ ಕಲ್ಲೋಲ ನಡೆದಿದೆಯೇ, ಅನೈತಿಕವಾಗಿ ಇದೆಯೇ ಅಕ್ರಮವಾಗಿದೆಯೇ ಇದೆಯೇ ಎಂದು ಯೋಚನೆ ಮಾಡಬೇಕು. ಆದುದರಿಂದ ನಾನು ಮೊನ್ನೆಯ ದಿನ ಹೇಳಿದೆ ಸುಮಾರು 8-10 ದಿವಸಗಳಾಯಿತು ರಿಕಾರ್ಡುಗಳೆಲ್ಲ ಬಂದು, ರಿಕಾರ್ಡುಗಳಲ್ಲಿ ಇನ್ನೂ ಬಂದಿಲ್ಲ ಎಂದರೆ, ಅದನ್ನು ಕೆಲವರು ದೊಡ್ಡದು ಮಾಡಿದರು ಕೆಲವು ರಿಕಾರ್ಡುಗಳು ಲಾಯರ ಕಡೆಗೆ ಇದ್ದುವು, ಕೆಲವನ್ನು ಕೋರ್ಟಿಗೆ ಕಳಿಸಿದ್ದೆವು, ಕೆಲವು ನಮ್ಮಲ್ಲಿಯೇ ಇದ್ದುವು. ಹೀಗಾಗಿ ಎಲ್ಲ ರಿಕಾರ್ಡುಗಳೂ ಬರಬೇಕಾದರೆ ಸ್ವಲ್ಪ ತಡವಾಯಿತು, ನಿಜ. ಸ್ವಲ್ಪ ತಡವಾದ್ದಕ್ಕೆ ಏನೋ ಆಗಿದೆ, ಎಂದು ಹೇಳಿದರು, ನಾನೇ ವೈಯುಕ್ತಿಕವಾಗಿ ಫೈಲುಗಳನ್ನೆಲ್ಲ ನೋಡುತ್ತಿದ್ದೇನೆ. ಅನ್ಯಾಯವಾಗುತ್ತದೆ ಎಂದು ಅನುಮಾನವಾಗಬೇಕಾಗಿಲ್ಲ. ಆವಸರವೇಕೆ? ಎಲ್ಲ ವಿಷಯಗಳನ್ನೂ ಸಭೆಯ ಮುಂದೆ ಇಡುತ್ತೇವೆ, ಒಬ್ಬ ಜುಡಿಷಿಯಲ್ ಆಫೀಸರನ್ನು ನೇಮಕ ಮಾಡಬೇಕಾದ ಸಂದರ್ಭವಿದ್ದರೆ ನೇಮಕ ಮಾಡುತ್ತೇನೆ. ನಿಮ್ಮ ಮುಂದೆ ತರಬೇಕು ಎಂದರೆ ತರುತ್ತೇನೆ. ಎರಡರಲ್ಲಿ ಯಾವುದಾದರೂ ಒಂದು ಕ್ರಮವನ್ನು ತೆಗೆದುಕೊಳ್ಳುತ್ತೇನೆ. ಅಲ್ಲಿ ಏನೂ ನಡೆದಿಲ್ಲದೆ ಇರಬಹುದು ಅನ್ಯಾಯ ನಡೆಯದೆ ಇದ್ದರು ಗುಲ್ಲು ಎಬ್ಬಿಸಿರಬಹುದು. ಎಲ್ಲಿ ನೋಡಿದರೂ ಗುಲ್ಲು, ಬರೀ ಗುಲ್ಲು, ಅನಾವಶ್ಯಕವಾಗಿ ಎದ್ದಿದೆ.

ಅಮೇರಿಕಕ್ಕೆ ಯಾರೋ ಇಂಥ ಸಮಾಚಾರವನ್ನು ಕಳಿಸಿದ್ದರು ಎಂದು ಕಾಣುತ್ತದೆ ಒಳ್ಳೆಯದು. ಅಮೇರಿಕದಿಂದ ಬಂದು ನೋಡಿಕೊಂಡು ಇಲ್ಲಿ ಏನೂ ನಡೆದಿಲ್ಲ ಎಂದು ಹೋಗಿದ್ದಾರೆ. ಕೇಂದ್ರ ಸರ್ಕಾರದವರೂ ಸಹ ನೋಡಿ ಅಲ್ಲಿ ಏನೂ ನಡೆದಿಲ್ಲ ಎಂದು ಬರೆದಿದ್ದಾರೆ. ಆದರೂ ಜನಗಳಲ್ಲಿ ಒಂದು ಅಭಿಪ್ರಾಯ ಬಂದಿದೆಯಲ್ಲ, ಅದನ್ನು ನಿವಾರಣೆ ಮಾಡತಕ್ಕದ್ದು ನ್ಯಾಯವೆಂದು ನಾನು ತಿಳಿದಿದ್ದೇನೆ. ಏನೇನು ವಿಷಯಗಳು ಬೇಕೋ ಅದೆಲ್ಲ ನನ್ನ ಹತ್ತಿರೆ ಬಂದಿದೆ. ಅದನ್ನು ನಾನು ಯೋಚನೆ ಮಾಡುತ್ತೇನೆ.

ಸಾರಿಗೆ ರಾಷ್ಟ್ರೀಕರಣದ ಬಗ್ಗೆ ಉತ್ತರ ಕೊಟ್ಟಿದ್ದಾರೆ. ಬಹುಶಃ ಈಗ ಹಾಗೆಯೇ ಮುಂದುವರಿಯುವುದು ಎಂದು ಕಾಣುತ್ತದೆ.

ಮಂತ್ರಿಗಳನ್ನು ತೆಗೆಯುವುದಿಲ್ಲ. ನೀವು ಏಕೆ ಶ್ರಮ ಪಟ್ಟುಕೊಳ್ಳುತ್ತೀರಿ?

ಮಾನ್ಯ ಸದಸ್ಯರು ಮಾತನಾಡುವಾಗ ಅವರು ಹೇಳುವುದರಲ್ಲಿ ಉತ್ಪ್ರೇಕ್ಷೆ ಎಷ್ಟಿದೆ ಎನ್ನುವುದನ್ನು ಹೇಳುತ್ತೇನೆ. ಮಾನ್ಯ ಚನ್ನಬೈರೇಗೌಡರು ಮಾತನಾಡುವಾಗ ವರ್ಗಾವರ್ಗಿಗಳನ್ನು ಮಾಡುವುದರಿಂದ 3 ಕೋಟಿ ರೂಪಾಯಿ ಖರ್ಚಾಗಿಬಿಡುತ್ತದೆ ಎಂದು ಹೇಳಿದರು ನಾನು ವಿಚಾರಿಸಿದೆ. ಇದಕ್ಕಾಗಿ ಸರಾಸರಿ 11 ಲಕ್ಷ ರೂಪಾಯಿಗಳು ಮಾತ್ರ ಖರ್ಚಾಗುತ್ತದೆ. ಮೂರು ಕೋಟಿಯಲ್ಲ. ಕೆಲವರಿಗೆ ಫಿಕ್ಸೆಡ್ ಟಿ.ಎ. ಕೊಡುತ್ತೇವೆ. ಅದನ್ನು ಬದಲಾವಣೆ ಮಾಡುವ ಹಾಗೆ ಇಲ್ಲ. ವರ್ಗಾವರ್ಗಿಯಿಂದ ಖರ್ಚಾಗತಕ್ಕದ್ದು 11 ಲಕ್ಷ ರೂಪಾಯಿ ಮಾತ್ರ. ಇದನ್ನು ಮೂರು ಕೋಟಿಗೆ ಏರಿಸಿದರು, ಅವರು ಹೇಳಿರುವ ಪ್ರಕಾರ ಅದು ಶೇಕಡ 2,700 ರಷ್ಟು ಆಯಿತು. ಸರ್ಕಾರ ಖರ್ಚು ಮಾಡುವುದು 3 ಕೋಟಿ ಅಲ್ಲ. 11 ಲಕ್ಷ ಆದ್ದರಿಂದ ಬರೀ ಉತ್ಪ್ರೇಕ್ಷೆ ಮಾಡುವುದು ಬೇಡ. ಕಳೆದ ಮಹಾ ಚುನಾವಣೆಯಲ್ಲಿ ಮಾಜಿ ಮಂತ್ರಿಯೊಬ್ಬರನ್ನು ಸೋಲಿಸುವ್ರುದಕ್ಕೆ , ನಾನು ಪ್ರಯತ್ನ ಮಾಡಿದೆನು ಎಂದು ಆರೋಪ ಮಾಡಿದ್ದನ್ನು ಕೇಳಿ ನನಗೆ ಬಹಳ ವಿಷಾದವಾಯಿತು. ವಿಷಯ ಸರಿಯಾಗಿ ತಿಳಿದುಕೊಂಡು ಮಾತನಾಡಿದ್ದರೆ ಚೆನ್ನಾಗಿತ್ತು. ನಾನು ಸಾಕಷ್ಟು ವರ್ಷಗಳಿಂದ ಕಾಂಗ್ರೆಸ್ಸಿನಲ್ಲಿ ಇದ್ದೇನೆ. ಕಾಂಗ್ರೆಸ್ ಸದಸ್ಯನಾಗಿ ಕೆಲಸ ಮಾಡಿದ್ದೇನೆ. ಆ ರೀತಿ ನಾನು ಮಾಡಿದ್ದರೆ ನಾನು ಇಲ್ಲಿರಲು ಲಾಯಕ್ಕಲ್ಲ. ಇಂಥ ಅನ್ಯಾಯದ ಕಾರ್ಯ ಮಾಡಿದರೆ ನಮ್ಮ ವಂಶ ಉಳಿಯುವುದಿಲ್ಲ.

ಆ ಮೇಲೆ ವಿದ್ಯಾಧರ ಗುರೂಜಿ ಅವರು ಬಹಳ ಆವೇಶಪೂರಿತವಾಗಿ ಮಾತನಾಡಿದರು. ಮೊನ್ನೆ ಮೊನ್ನೆಯವರೆಗೆ ಅವರು ಕಾಂಗ್ರೆಸ್ಸಿನಲ್ಲಿಯೆ ಇದ್ದವರು. ಎಲೆಕ್ಷನ್ ಬಂದಾಗ್ಗೆ ಅವರು ಬೇರೆಯಾದರು. ಇಲೆಕ್ಷನ್‌ನಲ್ಲಿ ಕಾಂಗ್ರೆಸ್ ಟಿಕೆಟ್ಟಿಗಾಗಿ ಅರ್ಜಿ ಕೊಟ್ಟು ಅವರಿಗೆ ಸ್ಥಳ ಸಿಕ್ಕದೇ ಹೋದದ್ದರಿಂದ ಈಗ ಕಾಂಗ್ರೆಸ್ಸನ್ನು ಬಯ್ಯುತ್ತಿದ್ದಾರೆ. ಸೀಟ್ ಸಿಕ್ಕಿದ್ದರೆ

ಹೊಗಳುವವರೂ ಇದ್ದಾರೆ. ಈಗ ಆ ಕಡೆ ಹೋಗಿ ತೆಗಳುತ್ತಾರೆ. ಅದು ಹೇಗೇ ಇರಲಿ. ಶ್ರೀಮಾನ್ ಐಕಳ ಅವರಂತೂ ಮಾತನಾಡುತ್ತಾ ಗಗನಕ್ಕೆ ಹಾರಿಬಿಟ್ಟರು. ಅವರ ಮಾತಿನಲ್ಲಿ ಅಷ್ಟು ಬಿಸಿ ಇದ್ದಿತು. ಅವರ ಹತ್ತಿರ ಒಂದು ಪಾತ್ರೆ ಇಟ್ಟಿದ್ದರೆ ಅದೂ ಕೂಡ ಬಿಸಿ ಆಗುತ್ತಿತ್ತು. ಅವರ ಉತ್ಸಾಹವನ್ನು ಮಾತ್ರ ನಾನೂ ಮೆಚ್ಚುತ್ತೇನೆ. ಆದರೆ ಅವರು ಹೇಳಿದ್ದನ್ನು ಮೆಚ್ಚುವುದಿಲ್ಲ.

ಕೊನೆಯದಾಗಿ ಹೇಳುವುದಾದರೆ ಶ್ರೀಮಾನ್ ಸುಂಠಣಕರ ಅವರು ಮಾತನಾಡುವುದರಲ್ಲಿ ಬಹಳ ಬುದ್ಧಿವಂತಿಕೆ ಚಾಣಕ್ಯತೆ ಉಪಯೋಗಿಸಿದ್ದಾರೆ. ಕಾಸರಗೋಡು ಮೈಸೂರು ರಾಜ್ಯಕ್ಕೆ ಬರಲಿಲ್ಲ ಹಾಗೆ ಇದೆ, ಹೀಗೆ ಇದೆ ಎಂದು ಹೇಳುತ್ತಾ ಅವರ ಮನಸ್ಸಿನಲ್ಲಿ ಇದ್ದುದನ್ನು ಕಡೆಗೆ ಹೇಳಿದ್ದಾರೆ. ಕಾಸರಗೋಡು ಬಗ್ಗೆ ಹೇಳುತ್ತಾ ನಮ್ಮಲ್ಲಿ ಭೇದಭಾವನೆ ಉಂಟುಮಾಡಲು ಪ್ರಯತ್ನ ಪಟ್ಟರು. ಮಹಾರಾಷ್ಟ್ರದವರು ನಮ್ಮ ರಾಜ್ಯದಲ್ಲಿಯೂ ಇದ್ದಾರೆ, ಕನ್ನಡಿಗರು ಅವರ ಮಹಾರಾಷ್ಟ್ರರಾಜ್ಯದಲ್ಲಿಯೂ ಇದ್ದಾರೆ. ಎಲ್ಲ ಕನ್ನಡ ಜನ ಇಲ್ಲಿಗೆ ಬರಬೇಕು ಎಂದು ನನ್ನ ಇಷ್ಟ. ಈ ತುರ್ತು ಪರಿಸ್ಥಿತಿಯ ಸಂದರ್ಭದಲ್ಲಿ ಅದನ್ನು ಮಾಡುವುದು ಬೇಡ ಎಂದು ನಿಲ್ಲಿಸಿದ್ದೇವೆ. ಕುಳಿತುಕೊಂಡು ಚರ್ಚೆ ಮಾಡಿ ವಿವಾದ ಇತ್ಯರ್ಥ ಮಾಡೋಣ ಎಂದು ಒಂದು ಮಾತನ್ನು ಮಹಾರಾಷ್ಟ್ರ ಸ್ನೇಹಿತರಿಗೆ ಹೇಳುತ್ತೇನೆ. ನಾನು ಆರು ವರ್ಷಗಳ ಹಿಂದೆ ಅವರಿಗೆ ಕಾಗದ ಬರೆದಿದ್ದೇನೆ. ಕಾರವಾರ ಜಿಲ್ಲೆ ಕೇಳುವುದಕ್ಕೆ ಹೋಗಬೇಡಿ. ಕಾರವಾರದಲ್ಲಿ ಲೈಟ್ ಹೌಸ್‌ನಲ್ಲಿರುವ 7 ಮನೆಗಳಲ್ಲಿ ಅಷ್ಟೇ ಮರಾಠಿ ಮಾತನಾಡುವವರ ಮೆಜಾರಿಟಿ ಇದೆ. ಆದರೆ ತಾಲ್ಲೂಕಿನಲ್ಲಿ ಅವರ ಮೆಜಾರಿಟಿ ಇಲ್ಲ. ಇದಕ್ಕೆ ಅಂಕಿ ಅಂಶಗಳ ಆಧಾರ ಇದೆ. ಕೊಂಕಣಿ ಮಾತನಾಡುವವರು ನಮ್ಮವರು ಎಂದು ಮರಾಠಿಗರು ಹೇಳುತ್ತಾರೆ. ಇದು ಆಗದ ಮಾತು. ಕೊಂಕಣಿಗಳು ಮಹಾರಾಷ್ಟ್ರೀಯರಲ್ಲ. ಮೈಸೂರು ಮಹಾರಾಷ್ಟ್ರ ಗಡಿ ಪ್ರಶ್ನೆಯನ್ನು ಜನಸಂಖ್ಯೆ ಆಧಾರದ ಮೇಲೆ ಯಾವುದಾದರೂ ಒಂದು ತೀರ್ಮಾನಕ್ಕೆ ಬರೋಣ. ಈ ಪ್ರಶ್ನೆ ಇಂದಲ್ಲ ನಾಳೆ ತೀರ್ಮಾನವಾಗಬೇಕಾದ ಪ್ರಶ್ನೆ. ಹೊರಗಡೆ ಹೋಗಬೇಕು ಎನ್ನುವವರಿಗೆ ಇಲ್ಲಿ ಇರಲು ಇಷ್ಟವಿಲ್ಲ. ಹೊರಗಡೆ ಉಳಿದಿರುವ ಕನ್ನಡಿಗರಿಗೆ ಇಲ್ಲಿ ಬರಲು ಇಷ್ಟವಿದೆ. ಇಂಥ ಪರಿಸ್ಥಿತಿ ಬಂದಿದೆ. ಯಾವ ಸಂದರ್ಭದಲ್ಲಾದರೂ ಇದು ತೀರ್ಮಾನವಾಗಬೇಕು. ಒಂದು ತೀರ್ಮಾನ ಮಾಡೋಣ. ಕರ್ನಾಟಕದವರು ಹೊರಗೆ ಉಳಿಯಬೇಕು ಎಂದು ನನ್ನ ಇಷ್ಟವೇ? ಎಂದಿಗೂ ಇಲ್ಲ. ಅವರು ಇನ್ನೊಂದು ಮಾತನ್ನು ಹೇಳಿದರು. ಮೈಸೂರು ರಾಜ್ಯದಲ್ಲಿ ಇರತಕ್ಕಂಥ ಅಲ್ಪ ಸಂಖ್ಯಾತರಿಗೆ ಬಹಳ ತೊಂದರೆಯಾಗುತ್ತಿದೆ ಎಂದು ಹೇಳಿದರು. ನಾನು ಇದರ ಬಗ್ಗೆ ವಿವರವಾಗಿ ಲೆಕ್ಕ ಕೊಡುವುದಕ್ಕೆ ಹೋಗುವುದಿಲ್ಲ. ಇದನ್ನು ಎಲ್ಲರೂ ಯೋಚನೆ ಮಾಡಿ ನೋಡಬಹುದು. 1956ರಲ್ಲಿ ಎಷ್ಟು ಮರಾಠಿ ಸ್ಕೂಲುಗಳು ಇದ್ದವು. ಈಗ ನಾವು ಎಷ್ಟು ಮಾಡಿದ್ದೇವೆ. ಮರಾಠಿ ವಿದ್ಯಾರ್ಥಿಗಳ ಸಂಖ್ಯೆ ಎಷ್ಟು ಇದ್ದಿತು, ಈಗ ಎಷ್ಟಿದೆ, ವಿದ್ಯಾಭ್ಯಾಸಕ್ಕಾಗಿ ಎಷ್ಟು ಹಣ ಖರ್ಚು ಮಾಡುತ್ತಿದ್ದೇವೆ ಎನ್ನುವುದನ್ನು ಲೆಕ್ಕಹಾಕಿ ನೋಡಬಹುದು. ಶೇಕಡ 25ರಷ್ಟು ಇದ್ದುದು ಈಗ 30ರಷ್ಟು ಜಾಸ್ತಿಯಾಗಿದೆ. ನಮ್ಮವರಿಂದ

ಏನೂ ಅನ್ಯಾಯವಾಗಿಲ್ಲ ಎಂದು ನಾನು ತಿಳಿದುಕೊಂಡಿದ್ದೇನೆ. ತೆಲಗರಿಗೆ, ತಮಿಳು ಅಲ್ಪ ಸಂಖ್ಯಾತರಿಗೆ ಏನೂ ಮಾಡಿಲ್ಲ ಎಂದು ಹೇಳುವುದು ಸರಿಯಲ್ಲ. ಯಾವ ಅಲ್ಪ ಸಂಖ್ಯಾತರಿಗೂ ಭಾಷಾ ದೃಷ್ಟಿಯಿಂದ ಯಾವ ಅನ್ಯಾಯವಾಗಿಲ್ಲ. ಬೇರೆ ಬೇರೆ ರಾಜ್ಯದಲ್ಲಿ ನಮ್ಮವರಿಗೆ ಏನು ಮಾಡಿದ್ದಾರೆ, ಇಲ್ಲಿ ನಾವು ಅವರಿಗೆ ಏನು ಮಾಡಿದ್ದೇವೆ ಎಂಬುದನ್ನು ನೋಡಬೇಕು.

ಕೊನೆಯದಾಗಿ ಶ್ರೀ ರೇವಣ್ಣಸಿದ್ದಪ್ಪನವರು ಬಹಳ ಸ್ವಾರಸ್ಯವಾಗಿ ಮಾತನಾಡಿದರು. ಅವರು ಮಾತನಾಡುವುದರಲ್ಲಿ ಒರಟುತನ ಬಿಟ್ಟಿದ್ದರೆ ಚೆನ್ನಾಗಿತ್ತು. ಅವರು ಹಾಗೆಯೇ ಇರಲಿ. ಅವರು ಒಂದು ಮಾತನ್ನು ಹೇಳಿದರು. ದೇಶದಲ್ಲಿ ಇಂಡಸ್ಟ್ರೀಸ್ ಜಾಸ್ತಿಯಾಗಿಲ್ಲ ಎಂದು ಹೇಳಿದರು. ಯಾವ ಇಂಡಸ್ಟ್ರೀಸ್ ಹಾಕಿ ಎಂದು ಅವರು ಹೇಳುತ್ತಾರೆ? ಪರಿಸ್ಥಿತಿ ಹೇಗಿದೆ ನೋಡಬೇಕು. ಎಲ್ಲವೂ ತುದಿಯವರೆಗೆ ಬಂದಿದೆ. ಅಲ್ಯೂಮಿನಿಯಂ ಫ್ಯಾಕ್ಟರಿ ಬರಲಿದೆ. ರಾಸಾಯನಿಕ ಗೊಬ್ಬರ ಕಾರ್ಖಾನೆ ಮಾಡುವುದರಲ್ಲಿ ಇದ್ದೇವೆ. ಮಂಗಳೂರಿನಲ್ಲಿ ಈ ಕಾರ್ಖಾನೆ ಪ್ರಾರಂಭವಾಗಬೇಕೆಂಬ ಸಲಹೆ ಇದೆ. ಅದು ಬರುತ್ತದೆ. ಇನ್ನೂ ಹೊಸದಾಗಿ ಯಾವ ಯಾವ ಕೈಗಾರಿಕೆ ಪ್ರಾರಂಭಿಸಬೇಕು? ಒಂದು ವೇಳೆ ಹೊಸ ಕೈಗಾರಿಕೆ ಪ್ರಾರಂಭ ಮಾಡಿದರೂ ಈಗಾಗಲೇ ೭-೮ ಲಕ್ಷ ಕಿಲೋ ವ್ಯಾಟ್ ಎಲೆಕ್ಟ್ರಿಸಿಟಿ ಡಿಮ್ಯಾಂಡ್ ಇದೆ. ಈಗ ಅಷ್ಟು ವಿದ್ಯುತ್‌ಚ್ಛಕ್ತಿ ಪೂರೈಸಲು ಸಾಧ್ಯವಿದೆಯೇ ? ಮುಂದಿನ ವರ್ಷ ಶರಾವತಿಯಿಂದ ವಿದ್ಯುತ್‌ಚ್ಛಕ್ತಿ ಬರುತ್ತದೆ. ಅದು ಬಂದ ಮಾರನೇ ದಿನವೇ ಇದಕ್ಕೆ ತಳಹದಿ ಹಾಕೋಣ. ಈ ಬಗ್ಗೆ ನಾವು ನಿರ್ಲಕ್ಷ್ಯ ಮಾಡಿಲ್ಲ. ಎಲೆಕ್ಟ್ರಿಸಿಟಿ ಅಭಾವದಿಂದ ಕೆಲಸ ನಿಂತಿದೆ.

ಬಾಕಿ ಎಲ್ಲಾ ವಿಷಯಗಳನ್ನು ಬೇರೆ ಮಂತ್ರಿಗಳು ಮಾತನಾಡಿ ಹೇಳಿದ್ದಾರೆ. ಇದು ಬಜೆಟ್ ಸೆಷನ್‌ನಲ್ಲಿ ನಡೆಯುವ ಜನರಲ್ ಡಿಸ್ಕಷನ್ ಅಲ್ಲ. ಆದರೆ ಈ ಚರ್ಚೆ ಜನರಲ್ ಡಿಸ್ಕಷನ್ ಹಾಗೆ ಆಯಿತು. ಅಲ್ಲೊಬ್ಬ ಆರ್.ಟಿ.ಒ. ಚೆನ್ನಾಗಿಲ್ಲ, ಇಲ್ಲೊಬ್ಬ ಅಧಿಕಾರಿ ಚೆನ್ನಾಗಿಲ್ಲ ನಮಗೆ ಅನ್ಯಾಯವಾಗಿದೆ ಹಾಗೆ ಆಗಿದೆ ಹೀಗೆ ಆಗಿದೆ ಎಂದು ಹೇಳಿದರು. ಹುಳುಕ ಮರ ಇದ್ದರೆ ಅದೇನು ಅಂಥ ಕಾಡು ಅಲ್ಲ. ಬಜೆಟ್ ಕಾಲದಲ್ಲಿ ಆಗತಕ್ಕಂಥ ಚರ್ಚೆ ಇದು ಅಲ್ಲ. ಈ ಅವಿಶ್ವಾಸ ನಿರ್ಣಯ ತಂದಿರುವುದು ನಿಮಗೆ ಗೌರವ ಅಲ್ಲ. ಯಾರಿಗೂ ಗೌರವ ಇಲ್ಲ ಎಂಬುದನ್ನು ಎಲ್ಲರೂ ಒಪ್ಪತಕ್ಕಂಥ ಮಾತು. ಒಟ್ಟಿನಲ್ಲಿ ಈ ನಿರ್ಣಯ ತಿರಸತವಾಗಬೇಕು ಎಂದು ನಾನು ಹೇಳುತ್ತೇನೆ.

ಶ್ರೀ. ಎಸ್. ಶಿವಪ್ಪ (ಶ್ರವಣಬೆಳಗೊಳ) :- ಮಾನ್ಯ ಸಭಾಪತಿಗಳವರೇ, ಈ ಸಭೆಯ ಮುಂದೆ ಮಂಡಿಸಿರತಕ್ಕಂಥ ನಿರ್ಣಯ ಏಕಪ್ರಕಾರವಾಗಿ ೧೫ ಗಂಟೆ ಕಾಲ ದೀರ್ಘ ಚರ್ಚೆಗೆ ಒಳಪಟ್ಟಿದೆ. ಚರ್ಚೆಯ ಅವಧಿಯಲ್ಲಿ ವಿರೋಧ ಪಕ್ಷದ ಅನೇಕ ಮಾನ್ಯ ಸದಸ್ಯರು ಬಹಿರಂಗವಾಗಿ ನನ್ನ ನಿರ್ಣಯಕ್ಕೆ ಅನುಮೋದನೆ ಇತ್ತಿದ್ದಾರೆ. ಅನೇಕ ಆಡಳಿತ ಪಕ್ಷದ

ಸದಸ್ಯರು ಮಾತಿನಲ್ಲಿ ವಿರೋಧ ಮಾಡುತ್ತೇವೆಂದು ಹೇಳಿದರೂ ಕೂಡ ಅವರ ವಾದ ಸರಣಿ ಅನುಮೋದನೆ ಮಾಡುವ ಹಾಗೆ ಅಂಕಿ ಅಂಶಗಳನ್ನು ಕೊಟ್ಟು ಯಾವ ವಾದ ಮಾಡಿದರೋ ಅದು ಸರ್ಕಾರ ಮಾಡಿರುವ ವಾದ ಆಗಿರಲಿಲ್ಲ. ನಮ್ಮ ವಾದದಲ್ಲಿ ತಿರುಳು ಇಲ್ಲ. ಹುರುಳು ಇಲ್ಲ ಎಂದು ಹೇಳುವುದನ್ನು ಬಿಟ್ಟರೆ ಬೇರೆ ಏನೂ ಹೇಳಲಿಲ್ಲ. ವಿರೋಧ ಪಕ್ಷದವರು ಸಭೆಯ ಮುಂದೆ ಬ್ರಹ್ಮಾಸ್ತ್ರ ತಂದು ಬಿಟ್ಟಿದ್ದಾರೆಂದು ಶ್ರೀ ಕೃಷ್ಣಪ್ಪನವರು ಹೇಳಿದರು. ನಾವು ಬ್ರಹ್ಮಾಸ್ತ್ರ ತಂದಿಲ್ಲ ಅದಕ್ಕೂ ಹೆಚ್ಚಿನ ಅಸ್ತ್ರ ನಮ್ಮ ಹತ್ತಿರ ಅದೆ. ಗುಬ್ಬಚ್ಚಿಯ ಮೇಲೆ ಬ್ರಹ್ಮಾಸ್ತ್ರ ಏಕೆ ಎಂದು ನಾನು ಕೇಳುತ್ತೇನೆ. ಈ ಬ್ರಹ್ಮಾಸ್ತ್ರ ಎದುರಿಸತಕ್ಕಂಥ ಪ್ರತಿ ಅಸ್ತ್ರ ನಿಮ್ಮ ಹತ್ತಿರ ಈ ಸಭೆಯಲ್ಲಿಲ್ಲ - ನಿಮ್ಮ ಬತ್ತಳಿಕೆಯಲ್ಲಿ ಇಂಥ ಅಸ್ತ್ರ ಇಲ್ಲ. ಆದುದರಿಂದಲೇ ಈ ಅವಿಶ್ವಾಸ ನಿರ್ಣಯ ನಿಮಗೆ ಬ್ರಹ್ಮಾಸ್ತ್ರವಾಗಿ ಪರಿಣಮಿಸಿದೆ.

ವಿದ್ಯಾ ಸಚಿವರಾದ ಶ್ರೀಮಾನ್ ಕಂಠಿಯವರು ಮಾತನಾಡಿದರು, ವಿದ್ಯಾ ಇಲಾಖೆಗೆ ಸಂಬಂಧಪಟ್ಟ ವಿಷಯದ ಚರ್ಚೆ ಮಾಡುವ ಕಾಲದಲ್ಲಿ ಸ್ಪಷ್ಟೀಕರಣ ಮಾಡುತ್ತ ಏನೋ ಒಂದು ವಾದ ಸಭೆಯ ಮುಂದೆ ಇಟ್ಟು ಸಮಸ್ಯೆ ಪರಿಹಾರ ಮಾಡುವುದರ ಬದಲು ಮತ್ತಿಷ್ಟು ಜಟಿಲ ಮಾಡಿ ಗೊಂದಲ ಎಬ್ಬಿಸಿಬಿಡುತ್ತಾರೆ. ಸೀಟುಗಳ ಹಂಚಿಕೆ, ಪರೀಕ್ಷೆ ಏನೇನೋ ಹೇಳಿರುವುದು ಗೊಂದಲವಾಗಿ ಪರಿಣಮಿಸಿದೆ. ಹೈಕೋರ್ಟ್ ರೂಲಿಂಗ್ ಏನಿದೆ ಅದನ್ನು ಓದಿಬಿಡುತ್ತೇನೆ.

In the result therefore, for the reasons set out above, the writ petitions are allowed. The modification of the circular issued by the D.P.I. exhibited its own soul for the conduct of examinations at the district level for the 8th Standard (4th Middle School Class) is quashed as having been passed without authority. We direct that a writ of mandamus must be issued to the Director of Public Instruction that he should consider the admission of these petitioners to the first year class of the High School without reference to the district level examinations in 1963." (Extract from Judgement)

ವಿದ್ಯಾರ್ಥಿಗಳಿಗೆ ಯಾವ ನ್ಯಾಯ ದೊರಕಿಸಿಕೊಡಬೇಕೆಂದು ಹೈಕೋರ್ಟು ಹೇಳಿತೋ ಅದಕ್ಕೆ ಯಾವ ಗತಿ ಬಂತು ಎಂಬುದನ್ನು ತಮ್ಮ ಮುಂದೆ ಇಟ್ಟಿದ್ದೇನೆ. ಇದರಿಂದ ದೇಶದಲ್ಲಿ ಅನ್ಯಾಯ ನಡೆದಿದೆ ಎಂಬುದನ್ನು ಹೈಕೋರ್ಟು ಶೃತಪಡಿಸಿದೆ.

ರಾಮಕೃಷ್ಣ ಹೆಗ್ಗಡೆ ಅವರು ವಾದ ಮಾಡುತ್ತ ನೀವು ಹೇಳುವುದರಲ್ಲಿ ತಿರುಳೇ ಇಲ್ಲ.

ಇಂಥ ಸಣ್ಣ ವಿಷಯಗಳನ್ನು ತಿಳಿಸಬೇಕಾಗಿದ್ದರೆ ಸಪ್ಲಿಮೆಂಟರಿ ಡಿಮ್ಯಾಂಡ್ ಮೇಲೆ ಮಾತನಾಡಬಹುದಾಗಿತ್ತು, ಅಲ್ಪ ಕಾಲಾವಧಿ ಪ್ರಶ್ನೆ ಕಳುಹಿಸಬಹುದಾಗಿತ್ತು ಎಂದು ಹೇಳಿ ಸಭೆಯ ನಿಯಮಾವಳಿಯ ಮೇಲೆ ಒಂದು ಭಾಷಣವನ್ನೇ ಮಾಡಿದ್ದಾರೆ, ಇದು ಏನು ತೋರಿಸುತ್ತದೆ ಎಂದರೆ ಈ ಅವಿಶ್ವಾಸ ನಿರ್ಣಯದ ಅಗತ್ಯತೆ ಏನಿದೆ, ಈ ಅಸ್ತ್ರವನ್ನು ಯಾವಾಗ ಉಪಯೋಗಿಸಬೇಕೆನ್ನುವ ಅರಿವೇ ಅವರಿಗೆ ಇಲ್ಲ. ಒಂದು ವರ್ಷದ ಹಿಂದೆ ತಂದ ಅವಿಶ್ವಾಸ ನಿರ್ಣಯ ಏನಿತ್ತು ಅಲ್ಲಿಂದ ಆಚೆಗೆ ಆದ ವಿದ್ಯಾಮಾನಗಳನ್ನು ವಿಚಾರ ಮಾಡಿ ಮುಖ್ಯಮಂತ್ರಿಗಳು ಸಮಾಧಾನಕರವಾದ ಉತ್ತರಗಳನ್ನು ಕೊಟ್ಟಿದ್ದರೆ ಇದಕ್ಕೆ ಅವಕಾಶವೇ ಇರಲಿಲ್ಲ. ಅವರ ಉತ್ತರದಿಂದಲೇ ಈಗ ತಂದಿರತಕ್ಕ ಅವಿಶ್ವಾಶ ನಿರ್ಣಯ ಸಾರ್ಥಕವಾಗಿದೆ ಎಂದು ಮುಖ್ಯಮಂತ್ರಿಗಳೇ ಹೇಳುತ್ತಾ ಇದ್ದಾರೆ. ಅವರೇ ಹೇಳಿದ್ದಾರೆ, ತುಲಾಭಾರಕ್ಕೆ ಸರ್ಕಾರದ ಖಜಾನೆಯಿಂದ ಹಣ ಖರ್ಚಾಗಿಲ್ಲ ಸಾರ್ವಜನಿಕರೇ ಅದನ್ನೆಲ್ಲಾ ಕೊಡಿಸಿದ್ದಾರೆ ಎಂದು, ಇವತ್ತು ರಾಷ್ಟ್ರೀಯ ರಕ್ಷಣಾ ನಿಧಿಗೂ ಸಾರ್ವಜನಿಕರಿಂದಲೇ ಹಣ ಬರುತ್ತಾ ಇರುವುದು ಅದು ಖಜಾನೆಯ ಹಣ ಅಲ್ಲ, ಸಾರ್ವಜನಿಕರಿಂದ ಅಧಿಕಾರಿಗಳ ಮುಖಾಂತರ ಬರುತ್ತಾ ಇದೆ, ರಾಷ್ಟ್ರೀಯ ರಕ್ಷಣಾ ನಿಧಿಗೆ ಶೇಖರ ಮಾಡುತ್ತಿದ್ದವರೇ ತುಲಾಭಾರಕ್ಕೂ ಶೇಖರ ಮಾಡಿದ್ದಾರೆ. ಅಂದ ಮೇಲೆ ಅದು ಬೇರೆ ಇದು ಬೇರೆ ಎಂದು ಹೇಳುವುದಕ್ಕಾಗುವುದಿಲ್ಲ. ತಾವು ಹೇಳಿದ ಹಾಗೆ ಅದಕ್ಕೆ ೧೦-೧೫ ಸಾವಿರ ರೂಪಾಯಿ ಖರ್ಚಾಗಿದೆ.

## ಅವಿಶ್ವಾಸ ಪ್ರಸ್ತಾವದ ಕುರಿತು ಚರ್ಚೆ

## 11ನೇ ಜನವರಿ 1965

ನಮ್ಮಲ್ಲಿ ವಿಶ್ವಾಸವಿಲ್ಲವೆಂದು ಸಭೆಯ ಮುಂದೆ ಏನೊಂದು ಸೂಚನೆ ಬಂದಿದೆಯೋ ಅದರ ಬಗ್ಗೆ ಏನೇನು ಹೇಳುತ್ತಾರೆಂದು ನಾಲ್ಕು ದಿವಸಗಳಿಂದ ಕೇಳುತ್ತಿದ್ದೇನೆ. ಏಕೆಂದರೆ ಅದಕ್ಕೆಲ್ಲ ಉತ್ತರ ಕೊಡಬೇಕೆಂಬ ಉದ್ದೇಶ ನನಗಿತ್ತು. ಆದರೆ ಈಗ ಉತ್ತರ ಕೊಡುವುದಕ್ಕೆ ಅವಕಾಶವಿಲ್ಲದಂತಾಗಿದೆ. ಕೆಲವು ಜನರು ಕಾಂಗ್ರೆಸ್‌ಗೆ ಸೇರಿರುವವರು ನನ್ನ ಮೇಲೆ ಮತ್ತು ನನ್ನ ಸಹೋದ್ಯೋಗಿಗಳ ಮೇಲೆ 24 ಆಪಾದನೆಗಳನ್ನು ಮಾಡಿ ದೂರು ಕೊಟ್ಟಿದ್ದಾರೆ. ಇದು ಏನೇನು ಎನ್ನುವುದನ್ನು ಅವರು ನನಗೆ ತಿಳಿಸಲಿಲ್ಲ ಅದು ಪತ್ರಿಕೆಗಳಲ್ಲಿ ಪ್ರಕಟವಾಯಿತು. ಪತ್ರಿಕೆಗಳಿಗೆ ಸೈಕ್ಲೋಸ್ಟೈಲ್ ಪ್ರತಿಗಳನ್ನು ಮಾಡಿ ಕೊಟ್ಟರು. ಅದರ ಮೇಲೆ ಪತ್ರಿಕೆಗಳಲ್ಲಿ ನಾನಾ ರೀತಿ ಟೀಕೆಗಳು ಬಂದವು. ಅದಕ್ಕೆ ನಾನು ಗಮನ ಕೊಡಲಿಲ್ಲ. ಆದರೆ ಕೇಂದ್ರ ಸರಕಾರಕ್ಕೆ ಒತ್ತಾಯ ಮಾಡಿ ತರಿಸಿಕೊಂಡೆ. ಅದನ್ನು ನೋಡಿದರೆ ಆ ಆಪಾದನೆಗಳು ವಾಸ್ತವಾಂಶಕ್ಕೆ ಬಹಳ ದೂರವಾಗಿದ್ದವು. ನಾನು ಹೇಳಬೇಕಾದುದನ್ನು ಕೇಂದ್ರಕ್ಕೆ ತಿಳಿಸಿದ್ದೇನೆ. ಅದರಲ್ಲಿರುವುದು ಇಲ್ಲಿ ಏನಾದರೂ ಬರುತ್ತದೆಯೋ ಏನೋ ಎಂದು, ಉತ್ತರ ಕೊಡಬೇಕೆಂದು ಕುತೂಹಲದಿಂದ ಕಾದಿದ್ದೆ, ಆದರೆ ಬರಲಿಲ್ಲ. ಏಕೆ ಅವುಗಳನ್ನು ಇಲ್ಲಿ ಪ್ರಸ್ತಾಪಿಸಲಿಲ್ಲ ಎಂಬುದು ಸದಸ್ಯರಿಗೆ ಗೊತ್ತು. ಈ ಸಭೆಯಲ್ಲಿ ಬಂದರೆ ನಾನು ಉತ್ತರ ಹೇಳುವಾಗ ಎಷ್ಟರಮಟ್ಟಿಗೆ ಸುಳ್ಳು ಆಪಾದನೆಗಳು ಬಂದಿವೆ, ಎಷ್ಟುಮಟ್ಟಿಗೆ ನಮ್ಮ ಹೆಸರನ್ನು ಕೆಡಿಸಲು ಹಾಗೂ ಸಮಾಜದಲ್ಲಿ ಮಂತ್ರಿಗಳ ಪ್ರಾಮಾಣಿಕತೆ, ಗೌರವ ಪ್ರತಿಷ್ಠೆಗಳನ್ನು ಕಡಿಮೆ ಮಾಡುವ ಪ್ರಯತ್ನ ಮಾಡಿದ್ದಾರೆಂಬುದು ಗೊತ್ತಾಗುತ್ತದೆ ಎಂದು ಅವುಗಳನ್ನು ಇಲ್ಲಿ ಅವರು ತಂದಿಲ್ಲ. ಅದರಲ್ಲಿ ಎಳ್ಳಷ್ಟಾದರೂ ಸತ್ಯಾಂಶವಿದ್ದಿದ್ದರೆ ಇಷ್ಟೊಂದು ಹೇಳುವ ಜನರು ಅದನ್ನೆಲ್ಲ ಸಭೆಯ ಮುಂದೆ ತರುತ್ತಿದ್ದರು. ಮಾನ್ಯ ಸದಸ್ಯರು ಪಾರ್ಲಿಮೆಂಟಿನಲ್ಲಿ ಎಸ್.ಎಸ್.ಪಿ. ಇಪ್ಪತ್ತು ಜನರೋ ಹದಿನೆಂಟು ಜನರೋ ಸೇರಿ ಎಂಟು ಆಪಾದನೆಗಳನ್ನು ಹಾಕಿ ಮೊದಲು ಕೊಟ್ಟಿದ್ದರು. ಅದು ಏನಾಯಿತೋ ಗೊತ್ತಿಲ್ಲ. ಎಂಟು ಆಪಾದನೆಗಳನ್ನು ಮಾತ್ರ ಹಾಕಿ ಕಳುಹಿಸಿದ್ದೇವೆ ಇನ್ನೂ ಹದಿನಾರು ಇವೆ ಅವನ್ನೂ ಹಾಕಿ ಕಳುಹಿಸೋಣ ಎಂದು ಮೊದಲು ಕಾಂಗ್ರೆಸ್ ಸದಸ್ಯರು ಕೊಟ್ಟಿದ್ದುದರಲ್ಲಿದ್ದುದನ್ನು ಮಕ್ಕೀಕಾಮಕ್ಕಿ ಕಾಪಿ ಮಾಡಿ ಹಾಕಿ ಕಳುಹಿಸಿದ್ದಾರೆ. ಯಾವುದೇ ಒಂದು ಹೊಸ ವಿಷಯವು ಇದರಲ್ಲಿಲ್ಲ. ಎಂದರ ಕೆಲವರು ಡೊವೆಟೇಲಿಂಗ್ ಎನ್ನುವ ಹಾಗೆ ಮಾಡಿದ್ದಾರೆ. ಅದನ್ನೆಲ್ಲ ಇಲ್ಲಿ ಅವರು ತರಬಹುದಾಗಿತ್ತು. ನನ್ನ ಸಹೋದ್ಯೋಗಿಗಳಾದ ಮಂತ್ರಿಗಳು ಅನರ್ಹರು ಎಂದು ಹೇಳಬಹುದಾಗಿತ್ತು. ಬಂದಾಗ ಬರಲಿ ಎಂದು ಅದನ್ನು ಕೈಬಿಟ್ಟರು. ಈಚೆಗೆ ಬಾಕಿ 16 ಆಪಾದನೆಗಳನ್ನೂ ಸೇರಿಸಿ ಕಳುಹಿಸಿದ್ದಾರೆ.

---

ವಿಧಾನ ಸಭೆ ನಡವಳಿಕೆ: ದಿ. 11-1-65 ಪುಟ 440-443

ನನ್ನ ಮೇಲೆ ಇನ್ನೊಂದು ಅಪಾದನೆ ಮಾಡಿದರು. ನಾನು ಬಹಳ ಒಳ್ಳೆಯವನು ಹೇಳಿದ್ದನ್ನೆಲ್ಲಾ ಕೇಳುತ್ತೇನೆ, ಹಿತ್ತಾಳೆ ಕಿವಿಯವರು ಸಣ್ಣಪುಟ್ಟ ಆಕ್ಷೇಪಣೆ ಮಾಡಲು ಸಾಧ್ಯವಿಲ್ಲ. ಆದರೆ ನನ್ನ ಸುತ್ತಮುತ್ತ, ಇರುವವರು ದೊಡ್ಡ ದೊಡ್ಡವರು ಆಗಿದ್ದಾರೆ. ಅವರು ಒಳ್ಳೆಯವರಲ್ಲ, ಸುತ್ತಮುತ್ತ ಇದ್ದವರು ನನ್ನ ಮನಸ್ಸು ಕೆಡಿಸುತ್ತಾರೆ ಎಂದು ಏನೇನೋ ಫುಕಾರ್ ಎಬ್ಬಿಸಿದರು. ನನ್ನ ಸುತ್ತಮುತ್ತ ಇರುವವರ ಯೋಗ್ಯತೆ ಪಾಪ ಅವರಿಗೇನು ಗೊತ್ತು. ನನ್ನ ಬಲಗಡೆ ಕುಳಿತು ಕೊಳ್ಳುವವರು ಬಹಳ ಯೋಗ್ಯರು. ನನಗಿಂತ ಅವರೇನು ಕಡಿಮೆಯಿಲ್ಲ.

ಇನ್ನೂ ಏನೇನೋ ಹೇಳಿದರು. ಅದಕ್ಕೆಲ್ಲಾ ಉತ್ತರ ಕೊಡುವ ಅವಶ್ಯಕತೆಯಿಲ್ಲ. ನಾನು ಒಂದು ಮಾತು ಎಲ್ಲರಿಗೂ ಹೇಳುತ್ತೇನೆ. ಇಲ್ಲಿ ಕುಳಿತಿರತಕ್ಕಂಥ ಎಲ್ಲ ಸದಸ್ಯರೂ ದೇವರ ಅಂಶ ಎಂದು ನಾನು ತಿಳಿದುಕೊಂಡಿದ್ದೇನೆ. ನಾನೇನಾದರೂ ಒಂದು ಕಾಸನ್ನು ನನ್ನ ಅಧಿಕಾರ ದುರುಪಯೋಗಪಡಿಸಿಕೊಂಡು ಸಂಪಾದಿಸಿದ್ದರೆ ಇಲ್ಲಿ ನಾನು ಕುಳಿತುಕೊಳ್ಳುವುದಕ್ಕೆ ನನಗೆ ಇಷ್ಟವಿಲ್ಲ. ನಾನು ಒಂದು ಪ್ರಾರ್ಥನೆಯನ್ನು ಭಗವಂತನಲ್ಲಿ ಮಾಡುತ್ತೇನೆ. ಸನ್ಮತಿ ದೇ ಭಗವಾನ್ ಎಲ್ಲರಿಗೆ ಒಳ್ಳೇ ಸದ್ಬುದ್ಧಿಯನ್ನು ದಯಪಾಲಿಸು ಎಂದು ದೇವರಲ್ಲಿ ಪ್ರಾರ್ಥನೆ ಮಾಡಿ ನನ್ನ ಮಾತು ಮುಗಿಸುತ್ತೇನೆ.

# ಮುಖ್ಯಮಂತ್ರಿ ಹಾಗೂ ಪಕ್ಷಾಧ್ಯಕ್ಷರಾಗಿ ದ್ವಂದ್ವ ಪಾತ್ರದ ಬಗೆಗಿನ ಚರ್ಚೆ

**21ನೇ ಫೆಬ್ರವರಿ 1968**

ನಾನು ಮುಖ್ಯಮಂತ್ರಿಯಾಗಿರುವುದಕ್ಕೆ ಕಾರಣ ಕಾಂಗ್ರೆಸ್ ಪಾರ್ಲಿಮೆಂಟರಿ ಪಾರ್ಟಿಯವರು ನನ್ನನ್ನು ನಾಯಕ ಮಾಡಿರುವುದರಿಂದ ಇವತ್ತು ನಾನು ಮುಖ್ಯಮಂತ್ರಿಯಾಗಿದ್ದೇನೆ. ಮುಖ್ಯಮಂತ್ರಿಯಾದ ಮೇಲೆ ನಾನು ಈ ಸಭೆಗೆ ಎಲ್ಲಾ ರೀತಿಯಲ್ಲೂ ಜವಾಬ್ದಾರನಾಗಬೇಕಾಗುತ್ತದೆ. ಅಲ್ಲದೆ ಎಲ್ಲಾ ಮಂತ್ರಿಗಳ ಮೇಲೂ ಜವಾಬ್ದಾರಿಯಿದೆ. ಇದು ಕಾನೂನು ಪ್ರಕಾರ ಮತ್ತು ಪ್ರಜಾಪ್ರಭುತ್ವದ ಪ್ರಕಾರ ಸರಿ. ನಾನು ಮುಖ್ಯಮಂತ್ರಿಯಾಗಿರುವುದು ಕಾಂಗ್ರೆಸ್ ಪಾರ್ಟಿಯ ನಾಯಕನಾಗಿಎಲ್ಲಿಯವರೆಗೆ ನಾನು ಪಾರ್ಟಿಯ ಮುಖಂಡನೋ, ಎಲ್ಲಿಯವರೆಗೆ ನಾನು ಮುಖ್ಯಮಂತ್ರಿಯಾಗಿರುತ್ತೇನೋ ಅಲ್ಲಿಯವರೆಗೆ ನಾನು ಈ ದೇಶದ ಹಾಗೂ ಈ ರಾಜ್ಯದ ಜನತೆಯ ಸುಖಕ್ಕಾಗಿ ಮತ್ತು ಒಳ್ಳೆಯದಕ್ಕೇ ಏನೇನು ಮಾಡಬೇಕೋ ಅದನ್ನು ಮಾಡುವುದಕ್ಕೆ ಸಿದ್ಧನಿದ್ದೇನೆ. ಈಗ ಮಾಡುತ್ತಿದ್ದೇನೆ ಇದು ನನ್ನ ಅಭಿಪ್ರಾಯವೂ ಹೌದು, ನನ್ನ ಪಾರ್ಟಿಯ ಅಭಿಪ್ರಾಯವೂ ಹೌದು, ದೇಶದ ಅಭಿಪ್ರಾಯವೂ ಹೌದು ಮತ್ತು ಬಹಳ ಜನಗಳ ಅಭಿಪ್ರಾಯವೂ ಕೂಡ ಹೌದು.

ಭಿನ್ನಾಭಿಪ್ರಾಯಕ್ಕೆ ಅವಕಾಶ ಉಂಟು. ಇವತ್ತು ಬಂದಿರತಕ್ಕ ಪ್ರಶ್ನೆ ನಾನು ಅಖಿಲಭಾರತದ ಕಾಂಗ್ರೆಸ್ ಅಧ್ಯಕ್ಷನಾಗಿ ಮುಖ್ಯಮಂತ್ರಿಯ ಹಾಗೂ - ಏಕಕಾಲದಲ್ಲಿ ಎರಡು ಕೆಲಸಗಳನ್ನು ಮಾಡುವುದಕ್ಕಾಗುವುದಿಲ್ಲವೆಂದು ಕೆಲವು ಸದಸ್ಯರುಗಳು ಹೇಳುತ್ತಿದ್ದಾರೆ. ಎರಡು ಕೆಲಸಗಳನ್ನು ಮಾಡುವುದಕ್ಕೆ ಕಾನೂನು ಪ್ರಕಾರ ಯಾವ ರೀತಿಯ ಪ್ರತಿಬಂಧಕವೂ ಇಲ್ಲವೆಂದು ಹೇಳುವುದಕ್ಕೆ ಇಷ್ಟಪಡುತ್ತೇನೆ. ಎರಡು ಕೆಲಸಗಳನ್ನು ಮಾಡುವುದಕ್ಕೆ ಕಾನೂನು ಪ್ರಕಾರ ಅವಕಾಶವಿದೆ. ಕಾಂಗ್ರೆಸ್‌ಪಕ್ಷದವರು ನನ್ನನ್ನು ಅಧ್ಯಕ್ಷನನ್ನಾಗಿ ಮಾಡಿದ್ದಾರೆ. ನಾನು ಮಾಡುತ್ತಿರುವ ಎರಡು ಕೆಲಸಗಳಿಗೂ ದ್ವಂದ್ವವಿದೆಯೆಂದು ನನಗೆ ಕಾಣಿಸುವುದಿಲ್ಲ. ಎರಡನ್ನೂ ಮುಂದುವರೆಸಿಕೊಂಡು ಹೋಗಬೇಕೇ ಅಥವಾ ಒಂದನ್ನು ಬಿಡಬೇಕೇ? ಬಿಡುವುದಾದರೆ ಯಾವುದನ್ನು ಬಿಡಬೇಕು ಎನ್ನುವ ಬಗ್ಗೆ ನನ್ನ ಪಾರ್ಟಿಯವರನ್ನು ಕೇಳಿ ಮಾಡುವುದಿದೆ. ಕಳೆದ 20 ವರ್ಷದಿಂದ ನಾನು ಕಾಂಗ್ರೆಸ್ ಕಾರ್ಯಕಾರಿ ಸಮಿತಿಯಲ್ಲಿದ್ದೇನೆ. ಇದುವರೆಗೆ ಕಾಂಗ್ರೆಸ್ ವರ್ಕಿಂಗ್ ಕಮಿಟಿಯ ಮೆಂಬರ್ ಆಗಿದ್ದು. ಈಗ ಅಧ್ಯಕ್ಷನಾಗಿದ್ದೇನೆ. ನಾನು ಅಧ್ಯಕ್ಷನಾಗಿರುವುದಕ್ಕೂ ಮುಖ್ಯಮಂತ್ರಿಯಾಗಿರುವುದಕ್ಕೂ ಸಂಬಂಧ ಕಲ್ಪಿಸುವುದಕ್ಕಾಗುವುದಿಲ್ಲ. ಮಾನ್ಯ ಶಿವಪ್ಪನವರು ನನ್ನ ವಿಚಾರದಲ್ಲಿ ಒಳ್ಳೆಯ ಅಭಿಮಾನ ಇಟ್ಟುಕೊಂಡಿದ್ದಾರೆ. ನಿಮಗೆ ಎರಡು ಕೆಲಸಗಳನ್ನು ಮಾಡುವುದಕ್ಕೆ ಸಾಧ್ಯವೇ ಎಂದು ಕೇಳಿದ್ದಾರೆ.

ನಾನು ಕಾಂಗ್ರೆಸ್ ಅಧ್ಯಕ್ಷನಾಗಿ ಚುನಾಯಿತನಾಗಿದ್ದೇನೆ. ಅಧ್ಯಕ್ಷನಾಗಿರುವುದಕ್ಕೂ,

---

ವಿಧಾನ ಸಭೆ ನಡವಳಿಕೆ: ದಿ. 21-2-68 ಪುಟ 118-221

ಮುಖ್ಯಮಂತ್ರಿಯಾಗಿರುವುದಕ್ಕೂ ವಿರೋಧ ಕಾಣಿಸುವುದಿಲ್ಲ. ನಾನು ಕಾಂಗ್ರೆಸ್ ಪಕ್ಷದ ನಾಯಕನಾಗಿದ್ದೇನೆ, ಅದೇ ರೀತಿ ಕಾಂಗ್ರೆಸ್ ಸಂಸ್ಥೆಯ ಅಧ್ಯಕ್ಷನೂ ಆಗಿದ್ದೇನೆ. ಎರಡು ಕೆಲಸಗಳನ್ನು ಮಾಡುವುದಕ್ಕೆ ಸಾಧ್ಯವೇ ಎನ್ನುವುದು ಮನುಷ್ಯನ ಶಕ್ತಿಯ ಮೇಲೆ, ಅನುಭವದ ಮೇಲೆ ಹಾಗೂ ವ್ಯಕ್ತಿಯ ಗುಣದ ಮೇಲೆ ಹೋಗುತ್ತದೆ. ನನ್ನ ಕೆಲಸಗಳಲ್ಲಿ ಏನಾದರೂ ತಪ್ಪುಗಳಿದ್ದರೆ, ಅಧಿಕಾರದಲ್ಲಿ ಏನಾದರೂ ತಪ್ಪುಗಳು ಇದ್ದರೆ ಹೇಳಲಿ. ಈಗ ರಾಜ್ಯಪಾಲರ ಭಾಷಣದ ಮೇಲೆ ಮಾತನಾಡಬಹುದು. ನಂತರ ಉತ್ತರ ಕೊಡುವುದಕ್ಕೆ ಅವಕಾಶವಿದೆ.

ನಾನು ಅಧ್ಯಕ್ಷನಾದ ಮೇಲೆ ಸರ್ಕಾರದ ಹಣವನ್ನು ಪಾರ್ಟಿಗೋಸ್ಕರ ಖರ್ಚು ಮಾಡಿಲ್ಲ. ಮಾನ್ಯ ಶಿವಪ್ಪನವರು ಒಂದು ವಿಚಾರ ಹೇಳಿದರು. ಪಾರ್ಟಿ ಕೆಲಸಕ್ಕೆ ವಿಧಾನಸೌಧದಿಂದ ಹೋಗಿದ್ದಾರೆಂದು ಅದನ್ನು ವಿಚಾರಿಸುತ್ತೇನೆ. ಮುಖ್ಯಮಂತ್ರಿಯಾದವರು ಒಂದು ರಾಜ್ಯದಿಂದ ಮತ್ತೊಂದು ರಾಜ್ಯಕ್ಕೆ ಹೋಗಬೇಕಾದಾಗ ತಿಳಿಸುವುದು ಅವಶ್ಯಕ. ಇಂತಹ ಸಂದರ್ಭಗಳಲ್ಲಿ ಎರಡು ಕಾಗದಗಳನ್ನು ಖರ್ಚು ಮಾಡುವುದಕ್ಕೆ ಬದಲು ಒಂದು ಕಾಗದ ಖರ್ಚು ಮಾಡಿದ್ದೇನೆ. ಮುಖ್ಯಮಂತ್ರಿಯಾಗಿ ಮತ್ತೊಂದು ರಾಜ್ಯಕ್ಕೆ ಹೋದಾಗ, ಆ ರಾಜ್ಯದವರು ಬಹಳ ಖರ್ಚು ಮಾಡಬೇಕಾಗುತ್ತದೆ. ಪ್ರತ್ಯೇಕವಾಗಿ ಪೋಲಿಸರನ್ನು ಕಳಿಸಬೇಕಾಗುತ್ತದೆ. ವಸತಿಯನ್ನು ಏರ್ಪಡಿಸಬೇಕಾಗುತ್ತದೆ. ನಾನು ಕಾಂಗ್ರೆಸ್ ಅಧ್ಯಕ್ಷನಾಗಿ ಬರುತ್ತೇನೆಂದು ತಿಳಿಸಿದರೆ ಯಾವ ಏರ್ಪಾಡುಗಳನ್ನೂ ಸಹ ಅವರು ಮಾಡುವ ಅಗತ್ಯವಿರುವುದಿಲ್ಲ. ನಾನು ಬೇರೆ ರಾಜ್ಯಗಳಿಗೆ ಹೋದಾಗ ಆ ಸರ್ಕಾರದವರು ಯಾವ ಖರ್ಚು ಸಹ ಮಾಡಿಲ್ಲ. ಇದುವರೆಗೆ ನಮ್ಮ ಸರ್ಕಾರದಿಂದಲೂ ಸಹ ಯಾವ ಖರ್ಚು ಸಹ ಆಗಿಲ್ಲ. ಎರಡು ಕಾಗದದ ಬದಲು ಒಂದು ಕಾಗದ ಖರ್ಚಾಗಿದೆ.

ಆ ರೀತಿ ನಮ್ಮ ಆಫೀಸಿನಿಂದ ಕಾಗದ ಕಳಿಸಿರತಕ್ಕಂಥದ್ದರಲ್ಲಿ ತಪ್ಪೇನಿಲ್ಲ. ಯಾಕೆಂದರೆ ಒಂದು ರಾಜ್ಯದ ಮುಖ್ಯಮಂತ್ರಿಗಳು ಅಲ್ಲಿಗೆ ಹೋಗತಕ್ಕವರು ಇದ್ದಾಗ್ಗೆ ಅವರಿಗೆ ಆ ರೀತಿ ತಿಳಿಸಬೇಕಾಗುತ್ತದೆ. ಆದುದರಿಂದ ಕಾಗದ ಬರೆದು ತಿಳಿಸಿದ್ದಾರೆ. ಒಂದು ವೇಳೆ ಇದು ಸರಿಯೋ ಅಲ್ಲವೊ ಎಂಬುದಕ್ಕೆ ಅಭಿಪ್ರಾಯ ಬರೆದು ಕಳಿಸಿದರೆ ಅದನ್ನು ನಾನು ನೋಡುತ್ತೇನೆ. ಅದನ್ನು ತಳ್ಳಿ ಹಾಕುವುದಕ್ಕೆ ಇಷ್ಟ ಪಡುವುದಿಲ್ಲ. ಅಲ್ಲಿ ಕಾಂಗ್ರೆಸ್ ಅಧ್ಯಕ್ಷರಾಗಿರಲು, ಇಲ್ಲಿ ಮುಖ್ಯಮಂತ್ರಿಗಳಾಗಿರಲು ಯಾವ ಪ್ರತಿಬಂಧಕವೂ ಇಲ್ಲ. ಯಾವಾಗ ಯಾವುದನ್ನು ಕೈಬಿಡಬೇಕು ಎನ್ನುವುದು ನನಗೆ ನಮ್ಮ ಪಕ್ಷಕ್ಕೆ, ನಮ್ಮ ಸಂಸ್ಥೆಗೆ ಬಿಟ್ಟದ್ದು. ಆದುದರಿಂದ ಇದರ ಬಗ್ಗೆ ಇಲ್ಲಿ ಚರ್ಚೆ ಮಾಡುವುದು ಅನವಶ್ಯಕ. ಇದರ ಬಗ್ಗೆ ಒಂದು ದಿವಸದಮಟ್ಟಿಗೆ ಸಾಕಷ್ಟು ಚರ್ಚೆಯಾಗಿ ಕಾಲ ವ್ಯರ್ಥವಾಗಿದೆ. ಇನ್ನು ಮುಂದಿನ ಕಾರ್ಯಕ್ರಮಕ್ಕೆ ಅವಕಾಶ ಕಲ್ಪಿಸಿ ಕೊಡುವುದಕ್ಕೆ ದಯೆ ಮಾಡಿ ಎಂದು ನಾನು ಅಪೇಕ್ಷೆಪಡುತ್ತೇನೆ.

## ಬೀಳ್ಕೊಡುಗೆ ಸಮಾರಂಭ

## 27ನೇ ಮಾರ್ಚ್ 1957

ಕಳೆದ ಐದು ತಿಂಗಳಲ್ಲಿ ನನ್ನ ಪ್ರಸ್ತುತ ಸ್ಥಾನದಲ್ಲಿ ಸಾಕಷ್ಟು ಸಂತೋಷ ಮತ್ತು ತೃಪ್ತಿಯನ್ನು ಪಡೆದಿದ್ದೇನೆ ಮತ್ತು ಈ ಸದನದಲ್ಲಿ ನಮ್ಮ ನಡುವೆ ನಡೆದ ಎರಡು ಸಭೆಗಳಿಂದ ನಾನು ಬಹಳಷ್ಟು ವಿಷಯವನ್ನು ತಮ್ಮಿಂದ ತಿಳಿದುಕೊಂಡಿರುತ್ತೇನೆ. ನನ್ನ ವಿರೋಧ ಪಕ್ಷದ ಸದಸ್ಯರಿಂದಲೇ ಅಲ್ಲದೇ ನಮ್ಮ ಪಕ್ಷದ ಸದಸ್ಯರಿಂದ ಹಾಗೂ ತಮ್ಮಿಂದಲೂ ಬಹಳಷ್ಟು ಕಲಿತ್ತಿರುತ್ತೇನೆ.

ಪ್ರಜಾಪ್ರಭುತ್ವದಲ್ಲಿ ಆಡಳಿತ ಪಕ್ಷಗಳಿಗೆ ದಾರಿತೋರಿಸುವ ಉದಾತ್ತ ಧ್ಯೇಯೋದ್ದೇಶಗಳೇ ವಿರೋಧ ಪಕ್ಷಕ್ಕೂ ಆದರ್ಶವಾಗಿರಬೇಕು. ಎಲ್ಲ ವಿರೋಧ ಪಕ್ಷದ ಸದಸ್ಯರಲ್ಲದಿದ್ದರೂ, ಬಹಳಷ್ಟು ಸದಸ್ಯರಲ್ಲಿ ಈ ಉದಾತ್ತ ಗುರಿಯಿರುವುದು ನನಗೆ ಸಂತೋಷ ತರುವ ವಿಷಯವಾಗಿದೆ.

ಮಾನ್ಯರೇ, ಸದನದಲ್ಲಿ ಈ ಪಕ್ಕದಲ್ಲಿ ಕುಳಿತಿರುವ ನನ್ನ ಸಹೋದ್ಯೋಗಿಗಳ ಬಗ್ಗೆ ಹೇಳುವುದಾದರೆ, ನಾವು 12 ಜನ ಒಂದೇ ಸುಖೀ ಪರಿವಾರದಂತೆ ಕೆಲಸ ನಿರ್ವಹಿಸಿದ್ದೇವೆಂದು ಹೇಳಲು ನನಗೆ ಬಹಳ ಸಂತೋಷವಾಗುತ್ತದೆ. ನಾನು ನನ್ನ ಕೆಲಸಕ್ಕೆ ಹೊಸಬ. ಅವರಲ್ಲಿ ಬಹಳಷ್ಟು ಜನ ನನ್ನ ಹಳೆಯ ಮಿತ್ರರಾಗಿದ್ದು ಆಡಳಿತ ನಿರ್ವಹಣೆಯಲ್ಲಿ ಉತ್ತಮ ಅನುಭವ ಹೊಂದಿದ್ದರು. ಅವರು ನನಗೆ ನೀಡಿದ ತಿಳುವಳಿಕೆ ಮತ್ತು ಜ್ಞಾನದ ಪರಿಣಾಮವಾಗಿ ನಾನು ನನ್ನ ಮುಖ್ಯಮಂತ್ರಿ ಸ್ಥಾನವನ್ನು ಸುಸೂತ್ರವಾಗಿ ನಿರ್ವಹಿಸುವಲ್ಲಿ ಯಶಸ್ವಿಯಾಗಿದ್ದೇನೆ. ನನಗಿಂತ ಹೆಚ್ಚಾಗಿ ನನ್ನ ಅಲ್ಪ ಯಶಸ್ಸಿನಲ್ಲಿ ಅವರ ಪಾತ್ರ ಹೆಚ್ಚಿನದಾಗಿದೆ.

ಮಾನ್ಯರೇ, ನನಗೆ ಸದನದಲ್ಲಿ ಬಹಳ ತೃಪ್ತಿಕೊಟ್ಟ ವಿಷಯವೆಂದರೆ ನಾನು ಸದನಕ್ಕೆ ಬಂದು ಸುತ್ತಲೂ ಕಣ್ಣು ಹಾಯಿಸಿದಾಗ, ನನಗೆ ಯಾರೂ ಯಾವಾಗಲೂ ಬೇರೆ ಬೇರೆ ಪ್ರಾಂತ್ಯಗಳಿಂದ ಬಂದವರಂತೆ ವ್ಯತ್ಯಾಸ ಕಂಡು ಬರಲೇ ಇಲ್ಲ. ವಿವಿಧ ಪ್ರಾಂತ್ಯಗಳಿಂದ ಬಂದ ನನ್ನ ಮಿತ್ರರೊಡನೆ ಕೆಲಸ ಮಾಡುವ ಅವಕಾಶ ದೊರೆತದ್ದು ನನ್ನ ಸೌಭಾಗ್ಯವೇ ಸರಿ. ವಿವಿಧ ಪ್ರಾಂತ್ಯಗಳಿಂದ ಬಂದ ಮಿತ್ರರಲ್ಲಿ ಕಂಡು ಬಂದ ವ್ಯತ್ಯಾಸವೆಂದರೆ, ಅದನ್ನು ವ್ಯತ್ಯಾಸವೆಂದು ಕರೆಯಬಹುದಾದರೆ, ಅವರು ಮಾತನಾಡುವ ಶೈಲಿ. ಅದು ನಿಜಕ್ಕೂ ಆಸಕ್ತಿಕರವಾಗಿದ್ದು ಮುಂದೆಯೂ ಆಸಕ್ತಿಯನ್ನು ಕೆರಳಿಸುತ್ತದೆ. ನಾವೆಲ್ಲರೂ ಬೇರೆ ಎಂಬ ಭಾವನೆಯೇ ಇಲ್ಲದೆ ಒಂದೇ ಮನೆಯವರಂತೆ ಇದ್ದೆವು. ಕನ್ನಡ ಮಾತನಾಡುವ ಪ್ರದೇಶಗಳನ್ನು ಒಂದುಗೂಡಿಸುವ ಪ್ರಯತ್ನ ಮಾಡಿದವರಲ್ಲಿ ನಾನೂ ನನ್ನ ಅಳಿಲು ಸೇವೆ ಸಲ್ಲಿಸಿದ್ದೇನೆ.

---

ವಿಧಾನ ಸಭೆ ನಡವಳಿಕೆ: ದಿ. 27-3-57 ಪುಟ 452-457

ನಾವು ಅದಕ್ಕಾಗಿ ಶ್ರಮಿಸಿದ್ದೇವೆ ಮತ್ತು ದುಡಿದಿದ್ದೇವೆ. ಈ ಕಾರ್ಯವನ್ನು ನಾವೆಂದೂ ಏಕಾಂಗಿ ಭಾವನೆಯಿಂದ ಮಾಡಲಿಲ್ಲ. ನಾವೆಲ್ಲರೂ ಭಾರತದಲ್ಲೇ ಉತ್ತಮ ರಾಜ್ಯವನ್ನಾಗಿ ರೂಪಿಸುವ ಉದ್ದೇಶದಿಂದ ದುಡಿದೆವು. ಅದೇ ನಮ್ಮ ಕಾರ್ಯದ ಮೂಲ ಉದ್ದೇಶ. ನಮಗಿರುವ ನೈಸರ್ಗಿಕ ಸಂಪನ್ಮೂಲಗಳ ಗಾತ್ರ ಮತ್ತು ವೈವಿಧ್ಯತೆಯನ್ನು ಗಮನಿಸಿದಾಗ ನಮ್ಮ ರಾಜ್ಯವು ಭಾರತದಲ್ಲೇ ಅತ್ಯಂತ ಶ್ರೀಮಂತ ರಾಜ್ಯವಾಗುತ್ತದೆಂದು ನಮಗೆಲ್ಲರಿಗೂ ಆರಂಭದಲ್ಲೇ ಗೊತ್ತಿತ್ತು. ನಮ್ಮಲ್ಲಿರುವ ಸಂಪತ್ತನ್ನು ಯಾವ ರಾಜ್ಯಕ್ಕೂ ಹೋಲಿಸಲು ಸಾಧ್ಯವಿಲ್ಲ. ಈ ಹೊಸ ರಾಜ್ಯದತ್ತ ಕಣ್ಣು ಹಾಯಿಸಿ ನೋಡಿದಾಗ ಖಂಡಿತವಾಗಿಯೂ ಗರ್ವವೆನಿಸುತ್ತದೆ. ಈ ರಾಜ್ಯದ ಸಂಪನ್ಮೂಲಗಳು ಎಷ್ಟು ವೈವಿಧ್ಯವಾಗಿದೆ ಎಂದರೆ ಇದನ್ನು ಸಮರ್ಪಕವಾಗಿ ಸಮಾಜದ ಒಳಿತಿಗಾಗಿ ಬಳಸುವುದು ಸರ್ಕಾರದ ಜವಾಬ್ದಾರಿಯಾಗಿದೆ. ಈ ಸಂಪನ್ಮೂಲಗಳನ್ನು ನಮ್ಮ ಅನುಕೂಲಕ್ಕಾಗಿ ಬಳಸಬೇಕಾಗಿದೆ. ನಾವು ಆ ಕಾರ್ಯವನ್ನು ಖಂಡಿತವಾಗಿ ಮಾಡುತ್ತೇವೆಂಬ ನಂಬಿಕೆ ನನಗಿದೆ.

ಈ ಸದನಕ್ಕೆ ಭವ್ಯವಾದ ಚರಿತ್ರೆ ಮತ್ತು ಪ್ರಜ್ವಲವಾದ ವರ್ತಮಾನ ಮತ್ತು ಇನ್ನೂ ಪ್ರಜ್ವಲವಾದ ಭವಿಷ್ಯ ಖಂಡಿತ ಇದೆ. ನಮ್ಮ ಅತ್ಯುನ್ನತ್ತ ಆದರ್ಶಗಳಿಗೆ ಅನುಗುಣರಾಗಿರುವ ಸಮಾಜವನ್ನು ಕಟ್ಟುವ ಸಲುವಾಗಿ ನಾವು ಜನಾಭಿಪ್ರಾಯವನ್ನು ಪ್ರತಿಬಿಂಬಿಸುತ್ತಾ ಅವರ ಆಸೆ ಮತ್ತು ಆಶೋತ್ತರಗಳಿಗನುಗುಣವಾಗಿ ಸಮಾಜವನ್ನು ನಿರ್ಮಿಸುತ್ತೇವೆ. ನಾವು ಸಮಾಜವಾದಿ ತತ್ವ ಆಧಾರಿತ ಸಮಾಜವನ್ನು ಕಟ್ಟಬೇಕಾಗಿದೆ ಮತ್ತು ನಮ್ಮ ಪ್ರಯತ್ನವನ್ನು ಆ ದಿಸೆಯಲ್ಲಿ ಒಗ್ಗೂಡಿಸಬೇಕಾಗಿದೆ.

## ಭಾಗ - 4

## ಮೈಸೂರು ವಿಧಾನ ಪರಿಷತ್ತು

| | | |
|---|---|---|
| 1. | ಮೈಸೂರು ಪಂಚಾಯತ್ ರಾಜ್ ಮಸೂದೆ 1964 - ಚರ್ಚೆ | 16 ಜುಲೈ 1964 |
| 2. | ನಾಗರೀಕ ಸೇವಾ ಆಯೋಗ ವರದಿ - ಚರ್ಚೆ | 19 ನವೆಂಬರ್ 1966 |
| 3. | ಸರಕಾರದ ಖರ್ಚು ಕಡಿಮೆ ಮಾಡುವುದರ ಬಗ್ಗೆ ಚರ್ಚೆ | 23 ಮಾರ್ಚ್ 1957 |
| 4. | ಮಹಾರಾಷ್ಟ್ರದೊಂದಿಗೆ ಗೋವಾದ ವಿಲೀನ ಕುರಿತು ಮಹಾರಾಷ್ಟ್ರ ವಿಧಾನಸಭೆಯಲ್ಲಿ ನಿರ್ಣಯ | 12 ಮಾರ್ಚ್ 1965 |

## ಭಾಗ - 4

## ಮೈಸೂರು ವಿಧಾನ ಪರಿಷತ್ತು

## ಮೈಸೂರು ಪಂಚಾಯಿತಿ ರಾಜ್ ಮಸೂದೆ 1964ರ ಮೇಲಿನ ಚರ್ಚೆ

ಈ ಪಂಚಾಯಿತಿ ರಾಜ್ ವಿಧೇಯಕವನ್ನು ಈಗ ಮಂಡಿಸಲಾಗಿದೆ. ಇದರ ವಿಚಾರದಲ್ಲಿ ನಾನು ಹೆಚ್ಚು ಹೇಳಬೇಕಾಗಿಲ್ಲ ಎಂದು ನನಗೆ ಕಾಣುತ್ತದೆ. ಮಾನ್ಯ ಸದಸ್ಯರಿಗೆ ಇದರಲ್ಲಿ ಎಷ್ಟು ಅಭಿಮಾನ, ವಿಶ್ವಾಸ ಇರಬೇಕೊ ಅಷ್ಟೂ ಇದ್ದು, ವಿಚಾರಗಳೆಲ್ಲಾ ಗೊತ್ತಿವೆ. ಪ್ರಜಾಪ್ರಭುತ್ವ ಯಶಸ್ವಿಯಾಗಿ ಪರಿಣಾಮಕಾರಿಯಾಗಿ ನಡೆಯಬೇಕಾದರೆ, ಜನರು ಇದರಲ್ಲಿ ವಿಶ್ವಾಸವಿಟ್ಟು, ತಮ್ಮ ಜವಾಬ್ದಾರಿ ಹೊರತಕ್ಕ ಅರ್ಹತೆ ಪಡೆಯಬೇಕಾದರೆ, ಇಂಥ ಒಂದು ಮಸೂದೆ ಅವಶ್ಯಕವೆಂದು ಕಂಡುಬಂದಿದೆ.

ಈಗಾಗಲೇ ಪಂಚಾಯ್ತಿ ಮತ್ತು ತಾಲ್ಲೂಕು ಬೋರ್ಡ್ ಅಷ್ಟನ್ನು ಕೆಲವು ದಿವಸಗಳಿಂದ ನಡೆಸುತ್ತಾ ಇದ್ದೇವೆ, ಅದರ ಅನುಭವವನ್ನು ಹೇಳಬೇಕೆಂದು, ನಮ್ಮ ಜನತೆ ಎಷ್ಟು ಮಟ್ಟಿಗೆ ಪರಿಣಾಮಕಾರಿಯಾಗಿ ಕೆಲಸ ಮಾಡಬಲ್ಲರು ಎಂಬುದನ್ನು ತಿಳಿದುಕೊಂಡಿದ್ದೇವೆ, ಆದ್ದರಿಂದ ಹೆಚ್ಚು ಹೆಚ್ಚು ಅಧಿಕಾರ ಅವರಿಗೆ ಕೊಡುತ್ತಾ ಬಂದರೆ ಅವರು ತಮ್ಮ ಜವಾಬ್ದಾರಿಯನ್ನು ಯಶಸ್ವಿಯಾಗಿ ನಡೆಸಬಲ್ಲರು ಎಂಬುದು ಸ್ಪಷ್ಟವಾಗಿದೆ. ಇದರಲ್ಲಿನ ನನ್ನ ಸ್ವಂತ ಅನುಭವವನ್ನು ಹೇಳಬಹುದಾದರೆ, ತಾಲ್ಲೂಕು ಬೋರ್ಡ್‌ಗಳವರು ಸುಮಾರು ನಾಲ್ಕು ವರ್ಷಗಳಿಂದ ಬಹಳ ಚೆನ್ನಾಗಿ ಕೆಲಸ ಮಾಡಿದ್ದಾರೆ. ಜನತೆಯ ಸೇವೆಯನ್ನು ಎಲ್ಲರೂ ಮೆಚ್ಚತಕ್ಕ ರೀತಿಯಲ್ಲಿ ನಡೆಸಿಕೊಂಡು ಬಂದಿದ್ದಾರೆ. ಆದರೆ, ಅನುಭವ ಪಡೆದ ಮೇಲೆ ಈ ಮೂರೂ ಹಂತದಲ್ಲಿ ಈ ಜವಾಬ್ದಾರಿಯನ್ನು ಹೊರಿಸತಕ್ಕದ್ದು ಸರಿಯೇ ಅಲ್ಲವೇ ಎಂಬುದನ್ನು ಆಲೋಚನೆ ಮಾಡಿ ಪಂಚಾಯ್ತಿ ಎಂದರೆ ಗ್ರಾಮಗಳಲ್ಲಿ, ತಾಲ್ಲೂಕಿನಲ್ಲಿ ಮತ್ತು ಜಿಲ್ಲೆಯಲ್ಲಿ ಅದಕ್ಕೆ ಸಂಬಂಧಪಟ್ಟ ಎಲ್ಲಾ ವ್ಯವಸ್ಥೆಯನ್ನೂ ಮಾಡುವುದಕ್ಕೆ ಜಿಲ್ಲಾ ಪರಿಷತ್ತು ಇರುವುದರ ಅವಶ್ಯಕತೆಯನ್ನು ಕಂಡುಕೊಂಡು ಇದನ್ನು ಮಾಡಿದೆ. ಜಿಲ್ಲಾ ಪರಿಷತ್ತನ್ನು ಏರ್ಪಾಡು ಮಾಡುವುದಲ್ಲದೇ ಸಾಧ್ಯವಾದ ಕಡೆ ನ್ಯಾಯ ಪಂಚಾಯ್ತಿಗಳನ್ನು ಮಾಡಿ, ಹಳ್ಳಿಯಲ್ಲಿ ಉಂಟಾಗತಕ್ಕ ವ್ಯಾಜ್ಯವನ್ನು ಅಲ್ಲಿಯೇ ಪರಿಹರಿಸುವುದಕ್ಕೂ ಈ ಕಾನೂನಿನಲ್ಲಿ ಅನುಕೂಲ ಮಾಡಿದೆ. ಚುನಾವಣೆಗಳು ನೇರವಾಗಿ ನಡೆಯಬೇಕೇ ಅಥವಾ ಇನ್‌ಡೈರೆಕ್ಟಾಗಿ ನಡೆಯಬೇಕೇ ಎನ್ನುವ ವಿಷಯವು ಇದರಲ್ಲಿ ಅಡಕವಾಗಿದೆ. ಆ ವಿಚಾರದಲ್ಲೂ ಮಾನ್ಯ ಸದಸ್ಯರು ದೀರ್ಘವಾಗಿ ಆಲೋಚನೆ ಮಾಡಿದ್ದಾರೆ ಎಂದು ಕಾಣುತ್ತದೆ. ಅವರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಬಹುದು.

---

ವಿ.ಪ.ನಡವಳಿಕೆ: ದಿ 16.7.64 ಪುಟ 2582-83

ಮುಖ್ಯವಾದ ವಿಚಾರ ಹಣಕಾಸಿನ ವಿಚಾರ. ಅದಕ್ಕೆ ಸಾಕಾದಷ್ಟು ಅಧಿಕಾರವನ್ನು ಇಲ್ಲಿ ಕೊಟ್ಟಿದೆ. ಪಂಚಾಯ್ತಿ, ತಾಲ್ಲೂಕು ಬೋರ್ಡು, ಮತ್ತು ಜಿಲ್ಲಾ ಪರಿಷತ್ತಿಗೆ ಯಾವ ರೀತಿ ಹಣವನ್ನು ಹಂಚಬೇಕು ಎಂಬ ವಿಚಾರವು ಇದರಲ್ಲಿ ಅಡಕವಾಗಿದೆ. ಈ ವಿಚಾರದಲ್ಲೂ ಮಾನ್ಯ ಸದಸ್ಯರು ತಮ್ಮ ಅಬಿಪ್ರಾಯವನ್ನು ಕೊಡುವುದು ಅತ್ಯಂತ ಅವಶ್ಯಕವಾಗಿದೆ.

ಎಲ್ಲಾ ಹಂತಗಳಲ್ಲೂ ಪ್ರಜಾಪ್ರಭುತ್ವ ಏರ್ಪಾಡಾಗಬೇಕು, ಅದು ಚೆನ್ನಾಗಿ ಆಗಬೇಕೆಂಬ ದೃಷ್ಟಿಯಿಂದ ಇದನ್ನು ಮಂಡಿಸಿದ್ದು ಆಗಿದೆ. ಇದರಲ್ಲಿ ಈ ಮೂರು ಹಂತಗಳಲ್ಲೂ ಆಗತಕ್ಕ ಕೆಲಸ ಕಾರ್ಯಗಳಿಗೆ ಒದಗಿಸಿರತಕ್ಕ ಹಣ ಸಾಲದೇ ಹೋದರೆ ಮತ್ತಷ್ಟು ಹಣವನ್ನು ಬೇರೆ ರೂಪದಲ್ಲಿ ಕೊಡಬೇಕಾದ್ದು, ಒದಗಿಸಬೇಕಾದ್ದು ಅವಶ್ಯಕ ಎಂದು ಕಾಣುತ್ತದೆ. ಅವರಿಗೆ ಯಾವ ಜವಾಬ್ದಾರಿ ಇದೆಯೋ ಅದನ್ನು ಯೋಗ್ಯವಾದ ರೀತಿಯಲ್ಲಿ ನಿರ್ವಹಿಸುವುದಕ್ಕೆ ಅವರಿಗೆ ಅನುಕೂಲ ಮಾಡಿಕೊಡುವುದಕ್ಕೆ ಸಾಕಾದಷ್ಟು ಅಧಿಕಾರವನ್ನು ಕೊಡುವುದಕ್ಕೆ ಬೇಕಾದ ಎಲ್ಲ ಏರ್ಪಾಡುಗಳೂ ಈ ಮಸೂದೆಯಲ್ಲಿ ಅಡಕವಾಗಿವೆ. ಇದನ್ನು ಮಾನ್ಯ ಸದಸ್ಯರು ಎಲ್ಲರೂ ಸ್ವಾಗತಿಸುತ್ತಾರೆ ಎಂದು ನಾನು ನಂಬಿದ್ದೇನೆ.

## ನಾಗರೀಕ ಸೇವಾ ಆಯೋಗದ ವರದಿ ಮೇಲಿನ ಚರ್ಚೆ
## 19ನೇ ನವೆಂಬರ್ 1966

ಪಬ್ಲಿಕ್ ಸರ್ವಿಸ್ ಕಮೀಷನ್ನಿನ ವರದಿಯನ್ನು ಆಲೋಚನೆ ಮಾಡಬೇಕು ಎಂದು ಹೇಳಿ ಮಾನ್ಯ ಸದಸ್ಯರ ಮುಂದೆ ಇಡಲಾಗಿತ್ತು. ಕಾನೂನು ಪ್ರಕಾರ ಯಾವ ಯಾವ ವರ್ಷದಲ್ಲಿ ಏನೇನು ಕೆಲಸ ಮಾಡಿದ್ದಾರೆ ಅವರು ಕೊಟ್ಟಿರತಕ್ಕಂಥ ಅಭಿಪ್ರಾಯವನ್ನು ಎಷ್ಟರ ಮಟ್ಟಿಗೆ ಸರ್ಕಾರದವರು ಮನ್ನಣೆ ಮಾಡಿದ್ದಾರೆ ಅಥವಾ ಮಾಡದೇ ಇರತಕ್ಕಂಥ ಉದಾಹರಣೆಗಳು ಯಾವುವು ಎನ್ನುವುದನ್ನು ಯೋಚನೆ ಮಾಡುವುದಕ್ಕೆ ಈ ವಿಚಾರವನ್ನು ನಿಮ್ಮ ಮುಂದೆ ಇಡಲಾಗಿದೆ. ಇದರಲ್ಲಿ ಮಾನ್ಯ ಸದಸ್ಯರು ಯೋಗ್ಯವಾದ ಸಲಹೆಗಳನ್ನು ಮಾಡಿದ್ದಾರೆ, ಕೆಲವರು ಅಸಂಬದ್ಧವಾದ ಸಲಹೆಗಳನ್ನೂ ಮಾಡಿದ್ದಾರೆ. ನೇರವಾಗಿ ಸಂಬಂಧಪಟ್ಟಿರುವುದನ್ನೂ ಮಾಡಿದ್ದಾರೆ, ಸಂಬಂಧ ಇಲ್ಲದೇ ಇರತಕ್ಕಂಥಾದ್ದನ್ನೂ ಹೇಳಿದ್ದಾರೆ. ಅವೆಲ್ಲವನ್ನೂ ಸಾಕಷ್ಟು ಕುತೂಹಲದಿಂದ ಕೇಳಿಕೊಂಡೆ. ಮಾನ್ಯ ಸದಸ್ಯರು, ಪಬ್ಲಿಕ್ ಸರ್ವಿಸ್ ಕಮೀಷನ್ನಿನ ಮೇಲೆ ಸಾಕಷ್ಟು ಟೀಕೆಗಳನ್ನು ಮಾಡಿದ್ದಾರೆ. ಈ ವಿಚಾರದಲ್ಲಿ ನಾನು ಏನೂ ಹೇಳುವುದಕ್ಕೆ ಹೋಗುವುದಿಲ್ಲ. ಕಮೀಷನ್ನಿನ ಸದಸ್ಯರಿಗೇ ಈ ವಿಚಾರ ಗೊತ್ತಾಗುತ್ತದೆ. ಅವರಲ್ಲಿ ಏನಾದರೂ ತಪ್ಪುವೊಪ್ಪುಗಳು ಇದ್ದರೆ ಸರಿ ಮಾಡಿಕೊಳ್ಳುತ್ತಾರೆ ಎಂದು ನಿರೀಕ್ಷೆ ಮಾಡುತ್ತೇನೆ.

ಮೊಟ್ಟಮೊದಲನೆಯದಾಗಿ, ದೊಡ್ಡ ಅಪವಾದ ಏನು ಬಂದಿದೆ ಎಂದರೆ ಕುಳಿತುಕೊಂಡು ಕೆಲಸ ಮಾಡುವುದಕ್ಕೆ ಅವರಿಗೆ ಸಾಕಷ್ಟು ಜಾಗ ಕೊಟ್ಟಿಲ್ಲ ಎಂದು. ಪಬ್ಲಿಕ್ ಸರ್ವಿಸ್ ಕಮೀಷನ್ನಿನ ಅಧ್ಯಕ್ಷರನ್ನು ಒಂದು ಕಡೆ ಕರೆದುಕೊಂಡು ಹೋಗಿ ಜಾಗ ತೋರಿಸಿದೆವು. ಅವರಿಗೆ ಒಪ್ಪಿಗೆ ಬರಲಿಲ್ಲ ಕಬ್ಬನ್ ಪಾರ್ಕ್‌ನಲ್ಲಿ ಜಾಗ ಕೊಡಬೇಕು ಎಂದು ಕೇಳಿದರು. ಈಗ ಇರತಕ್ಕಂಥ ಸ್ಥಳದಲ್ಲಿಯೇ ಒಂದು ಹೊಸ ಕಟ್ಟಡ ಕಟ್ಟಿಸಕೊಡಬೇಕು ಎನ್ನುವುದು ಅವರ ಅಪೇಕ್ಷೆ. ಈಗ ಸರ್ಕಾರದವರು ಒಂದು ತೀರ್ಮಾನ ಮಾಡಿದ್ದಾರೆ. ಏನೆಂದರೆ, ಈಗ ಕಟ್ಟಡ ಏನು ಇದೆಯೋ ಅಷ್ಟೇ ವಿನಾ ಇನ್ನು ಒಂದು ಚೂರೂ ಕಟ್ಟಡ ಕಬ್ಬನ್ ಪಾರ್ಕಿನಲ್ಲಿ ಕಟ್ಟಬಾರದು ಎಂದೂ, ಯಾರಿಗೇ ಆಗಲಿ ಈಗ ಇರುವ ಕಟ್ಟಡ ವಿನಾ ಹೊಸ ಕಟ್ಟಡ ಕಟ್ಟುವುದಕ್ಕೆ ಸಾಧ್ಯವಿಲ್ಲ ಎಂದೂ ಅವರಿಗೆ ಹೇಳಿದ್ದೇವೆ. ಹಾಗೆ ಹೇಳಿ ಸುಮಾರು ಒಂದು ವರ್ಷವಾಯಿತು ಎಂದು ಕಾಣುತ್ತದೆ. ಅಧ್ಯಕ್ಷರಿಗೆ ತಿಳಿಸಿದ್ದೂ ಆಯಿತು. ಬೆಂಗಳೂರಿನಲ್ಲಿ ನಿಮಗೆ ಅನುಕೂಲ ಅಗುವ ಜಾಗ ಬೇರೆ ಇದ್ದರೆ ತೋರಿಸಿಕೊಡಿ, ಕಟ್ಟಡ ಕಟ್ಟಿಸಿಕೊಡುತ್ತೇವೆ ಎಂದು ಹೇಳಿದ್ದೇವೆ. ಅವರು ಏನಾದರೂ ಯೋಗ್ಯವಾದ ಸ್ಥಳ ಇದೆ ಎಂದು ಹೇಳಿದರೆ, ಆಗ ಅವರಿಗೆ ಅನುಕೂಲ ಮಾಡಿಕೊಡುತ್ತೇವೆ. ಆಗ ಕಛೇರಿ ಚೆನ್ನಾಗಿ ನಡೆಸಬಹುದು. ಅದುದರಿಂದ ಸರ್ಕಾರದ ಮೇಲೆ ಟೀಕೆ ಮಾಡುವುದಕ್ಕೆ ಸಕಾರಣಗಳು ಇಲ್ಲ ಎಂದು ಮಾತ್ರ ಹೇಳುತ್ತೇನೆ. ಕುಳಿತುಕೊಂಡು ಕೆಲಸ ಮಾಡುವುದಕ್ಕೆ ಯೋಗ್ಯ ಸ್ಥಳ ಬೇಕು ಎಂದರೆ ಅದನ್ನು ಮಾಡಿಕೊಡುವುದಕ್ಕೆ ಸರ್ಕಾರ ಸಿದ್ಧವಾಗಿದೆ.

---
ವಿ.ಪ.ನಡವಳಿಕೆ: ದಿ. 19.11.66 ಪುಟ 116-211

ಈಗ ಇರತಕ್ಕಂಥ ಸ್ಥಳದಿಂದ ಅನುಕೂಲವಾಗಿಲ್ಲ. ಒಂದೊಂದು ಸಲ ಏನಾಗುತ್ತದೆ ಎಂದರೆ, ಅರ್ಜಿ ಹಾಕಿರತಕ್ಕವರ ಸಂಖ್ಯೆ ಬಹಳ ಜಾಸ್ತಿಯಾಗಿದೆ. ಹಾಗಾಗಿ ಬಹಳ ಅನಾನುಕೂಲವಾಗಿರಬೇಕು. ನಾವು ಸದ್ಯದಲ್ಲಿ ಏನೂ ಮಾಡುವುದಕ್ಕಾಗುವುದಿಲ್ಲ. ಅವರು ಸ್ಥಳ ಒದಗಿಸಿಕೊಟ್ಟರೆ ಅನುಕೂಲ ಮಾಡಿಕೊಡುತ್ತೇವೆ.

ಮೊಟ್ಟಮೊದಲನೆಯದಾಗಿ ಪಬ್ಲಿಕ್ ಸರ್ವಿಸ್ ಕಮೀಷನ್ನಿನ ಸದಸ್ಯರು (ಬ್ಲಾಟಿಂಗ್ ಪೇಪರ್) ಒತ್ತು ಕಾಗದ, ರಬ್ಬರ್ ಸ್ಟಾಂಪ್ ಆಗಿದ್ದಾರೆ, ಅವರಿಗೆ ವ್ಯಕ್ತಿತ್ವ ಇಲ್ಲ, ಸರ್ಕಾರ ಹೇಳಿದ ಹಾಗೆ ಕೇಳುತ್ತಾರೆ. ಆದುದರಿಂದ ಅವರು ಕೆಲಸ ಮಾಡುವುದಕ್ಕೆ ಸಾಧ್ಯವಿಲ್ಲ ಎಂದು ಹೇಳಿದ್ದಾರೆ. ಸರ್ಕಾರ ಏನು ಹೇಳಿದರೂ ಅದಕ್ಕೆ ಹೊಗುಟ್ಟುಕೊಂಡು ವಿರೋಧ ಮಾಡದೆ, ಹೇಳಿದ್ದಕ್ಕೆಲ್ಲಾ ಸೈ ಎಂದುಕೊಂಡು ಕೆಲಸ ಮಾಡತಕ್ಕ ಜನ, ಅವರಿಗೆ ಅರ್ಹತೆ ಇಲ್ಲ ಎಂದು ಒಂದು ಕಡೆ ಅಭಿಪ್ರಾಯ ವ್ಯಕ್ತಪಡಿಸಲಿಕ್ಕೆ ಪ್ರಯತ್ನಪಟ್ಟರು. ಅದು ಶುದ್ಧ ತಪ್ಪು. ನಾವು ಚುನಾಯಿಸಿರತಕ್ಕ ಜನ ಸದಸ್ಯರ ವಿಚಾರದಲ್ಲಿ ಯಾರ ಮೇಲೂ ಏನೂ ಪುಕಾರು ಬಂದಿಲ್ಲ. ಅವರು ದೊಡ್ಡ ಮನುಷ್ಯರು ಯೋಗ್ಯರು, ಅರ್ಹತೆ ಇದ್ದವರು, ಪ್ರಾಮಾಣಿಕರು ಮತ್ತು ದಕ್ಷರು ಎಂದು ಯೋಚನೆ ಮಾಡಿ ನೇಮಕ ಮಾಡಿದ್ದಾಗಿದೆ. ಏನೋ ಒಂದು ಪಾರ್ಟಿಯಿಂದ ತೆಗೆದುಕೊಂಡಿದ್ದಾರೆ ಎಂದು ಅಪವಾದ ಬಂತು. ಒಂದು ಪಾರ್ಟಿಯಿಂದಲೇ ತೆಗೆದುಕೊಳ್ಳಲಿ, ಅಥವಾ ಎಲ್ಲಿಂದಲೇ ತೆಗೆದುಕೊಳ್ಳಲಿ ಅವರಿಗೆ ಯೋಗ್ಯತೆ ಇದೆಯೇ ಇಲ್ಲವೇ ಎನ್ನುವುದು ಮುಖ್ಯ. ನಮ್ಮ ಪಾರ್ಟಿಯಲ್ಲಿ ಇದ್ದವರನ್ನು ಹೈಕೋರ್ಟ್ ಜಡ್ಜನ್ನಾಗಿ ಮಾಡಿದ್ದೇವೆ. ಚೀಫ್ ಜಸ್ಟೀಸನ್ನಾಗಿ ಮಾಡಿದ್ದೇವೆ. ಹಾಗೆ ಹೇಳಿದಾಕ್ಷಣಕ್ಕೆ ಅವರು ಸರಿಯಾಗಿ ಕೆಲಸ ಮಾಡಿಲ್ಲ ಎಂದು ಹೇಳುವುದಕ್ಕಾಗುವುದಿಲ್ಲ. ಡಿಲ್ಲಿಯಲ್ಲಿ ಚೀಫ್ ಜಸ್ಟೀಸ್ ನಮ್ಮ ಜೊತೆಗೆ ಕುಳಿತಿದ್ದವರು. ಅವರು ಒಂದು ಪಾರ್ಟಿಗೆ ಸೇರಿದವರು, ಆದುದರಿಂದ ಆ ಪಾರ್ಟಿಯ ಕೆಲಸ ಮಾತ್ರ ಮಾಡುತ್ತಾರೆ ಎಂದು ಹೇಳುವುದಕ್ಕಾಗುವುದಿಲ್ಲ. ಆದುದರಿಂದ ಇವೊತ್ತು ಪಬ್ಲಿಕ್ ಸರ್ವಿಸ್ ಕಮೀಷನ್ನಿನಲ್ಲಿ ಸದಸ್ಯರನ್ನು ಏನು ನೇಮಕ ಮಾಡಿದ್ದೇವೊ ಅವರೆಲ್ಲರೂ ಯೋಗ್ಯರೇ. ಒಂದು ಪಾರ್ಟಿಗೆ ಸೇರಿರತಕ್ಕವರು ಎನ್ನುವುದನ್ನು ಜ್ಞಾಪಕದಲ್ಲಿಟ್ಟುಕೊಂಡು ತಪ್ಪಿಗೆ ಒಳಗಾಗದ ಹಾಗೆ ಕೆಲಸ ಮಾಡುತ್ತಾ ಇದ್ದಾರೆ, ಯೋಗ್ಯರೀತಿಯಿಂದ, ನಿಷ್ಪಕ್ಷಪಾತ ದೃಷ್ಟಿಯಿಂದ ಕೆಲಸ ಮಾಡುತ್ತಿದ್ದಾರೆ ಎಂದು ಹೇಳುವುದಕ್ಕೆ ಸಂತೋಷಪಡುತ್ತೇನೆ.

ಮತ್ತೆ ಮುಖ್ಯವಾಗಿ ಕೇಡರ್ ಅಂಡ್ ರಿಕ್ರೂಟ್‌ಮಂಟ್ ರೂಲ್ಸ್ ಆಗಿಲ್ಲ. ಅದರಿಂದ ತೊಂದರೆ ಆಗಿದೆ ಎಂದು ಹೇಳಿದ್ದಾರೆ. ಸ್ವಲ್ಪಮಟ್ಟಿಗೆ ಇದು ಒಪ್ಪಬೇಕಾದ ವಿಚಾರ. ಮೈಸೂರು ರಾಜ್ಯಕ್ಕೆ 5 ಭಾಗಗಳು ಬಂದಿರುವುದರಿಂದ ಬಹಳ ಎಡರು ತೊಡರುಗಳು ಉಂಟಾಗಿವೆ. ಹೀಗಾಗಿ ತಡವಾಗಿದೆ ನಿಜ, ಈಗ ಸುಮಾರು 7 ಡಿಪಾರ್ಟ್‌ಮೆಂಟ್‌ಗಳಲ್ಲಿ ಹಾಗೆಯೇ ಉಳಿದಿದೆ, ಬಾಕಿ ಎಲ್ಲಾ ಆಗಿದೆ. ಅಂದರೆ ಶೇಕಡ 92-93 ರಷ್ಟು ಕೆಲಸ ಪೂರೈಸಿದೆ. ಇನ್ನೂ ಸ್ವಲ್ಪ ಇದೆ. ಎಜುಕೇಷನ್ ಡಿಪಾರ್ಟ್‌ಮೆಂಟ್

ನಲ್ಲಿ ರೂಲ್ಸ್ ಎಲ್ಲಾ ಪೂರ್ತಿಯಾಗಿ ಪಬ್ಲಿಕ್ ಸರ್ವಿಸ್ ಕಮೀಷನ್ನಿಗೆ ಕಳಿಸಿದೆ. ಅವರಿಂದ ನಾವು ನಿರೀಕ್ಷಣೆ ಮಾಡುತ್ತಾ ಇದ್ದೇವೆ. ಬಹುಶಃ ಬಂದ ತಕ್ಷಣ ಅದನ್ನು ಪರೀಕ್ಷೆ ಮಾಡಿ ಏನು ಕೆಲಸ ಮಾಡಬೇಕೋ ಅದನ್ನು ಮಾಡುತ್ತೇವೆ. ಎಜುಕೇಷನ್ ಡಿಪಾರ್ಟ್‌ಮೆಂಟಿಗೆ ಸಂಬಂಧಪಟ್ಟಂತೆ ನ್ಯಾಷನಲ್ ಕೆಡೆಟ್ ಕೋರ್ ಇದೆ. ಅದರ ರೂಲ್ಸ್ ಮಾಡಿ ಕಳುಹಿಸಿದೆ. ಈಗ ತಾನೇ ಪಬ್ಲಿಕ್ ಸರ್ವಿಸ್ ಕಮೀಷನ್ ಅವರ ಅಭಿಪ್ರಾಯಕ್ಕೆ ಕಳಿಸಿದ್ದಾರೆ. ಮಾರ್ಕೆಟಿಂಗ್ ಇಲಾಖೆಗೆ ಸಂಬಂಧಪಟ್ಟಿರುವ ರೂಲ್ಸ್ ಮಾಡಿ 28-7-1965ರಲ್ಲಿ ಪಬ್ಲಿಕ್ ಸರ್ವಿಸ್ ಕಮೀಷನ್ನಿನಗೆ ಕಳುಹಿಸಿದೆ. ಅದು ಅಲ್ಲಿಂದ ಬಂದಿದೆ. ಸಂಬಂಧಪಟ್ಟ ಇಲಾಖೆಯವರು ಯೋಚನೆ ಮಾಡುತ್ತಾ ಇದ್ದಾರೆ. ವ್ಯವಸಾಯ ಇಲಾಖೆ, ಫಾರೆಸ್ಟ್ ಇಲಾಖೆ, ಹಾರ್ಟಿಕಲ್ಚರಲ್ ಇಲಾಖೆ, ಈ ಇಲಾಖೆಯಲ್ಲಿ ಅದು ಆಗಿಲ್ಲ ರೂಲ್ಸ್ ಫ್ರೇಮ್ ಮಾಡಿದೆ. ಅದು ಪಬ್ಲಿಕ್ ಸರ್ವಿಸ್ ಕಮೀಷನ್ನಿನಿಂದ ಬಂದಿದೆ, ಕ್ಯಾಬಿನೆಟ್‌ಗೆ ಬರುತ್ತದೆ. ಡೈರಿ ಪ್ರಾಜೆಕ್ಟ್ ಇಲಾಖೆಯಲ್ಲಿಯೂ ರೂಲ್ಸ್ ಆಗಿದೆ. ಅದನ್ನು 4-12-65ರಲ್ಲಿ ಪಬ್ಲಿಕ್ ಸರ್ವಿಸ್ ಕಮೀಷನ್ನಿಗೆ ಕಳುಹಿಸಿಕೊಟ್ಟಿದೆ. ಹೋಮ್ ಡಿಪಾರ್ಟ್‌ಮೆಂಟಿನಲ್ಲಿ ಪಬ್ಲಿಕ್ ಪ್ರಾಸಿಕ್ಯೂಟರುಗಳಿಗೆ ಸಂಬಂಧಪಟ್ಟ ರೂಲ್ಸ್ ತಯಾರಾಗಿ ಅದನ್ನು ಪಬ್ಲಿಕ್ ಸರ್ವಿಸ್ ಕಮೀಷನ್ನಿಗೆ ಕಳುಹಿಸಿ ಅವರ ಅಭಿಪ್ರಾಯಗಳೂ ಕೂಡ ಬಂದಿದೆ. ಆ ಮೇಲೆ ಕೈಗಾರಿಕೆ ಮತ್ತು ವಾಣಿಜ್ಯೋದ್ಯಮ ಇಲಾಖೆ ಮತ್ತು ಎಸ್.ಪಿ.ಸಿ. ಇಲಾಖೆಗಳಿಗೆ ಸಂಬಂಧಪಟ್ಟ ರೂಲ್ಸ್ ತಯಾರಾಗಿದೆ. ಅದನ್ನು ಪಬ್ಲಿಕ್ ಸರ್ವಿಸ್ ಕಮೀಷನ್ನಿಗೆ ಕಳುಹಿಸಿ ಅವರ ಅಭಿಪ್ರಾಯ ಬಂದಿದೆ ಅದನ್ನು ಸಂಬಂಧಪಟ್ಟ ಇಲಾಖೆಗಳವರು ಪರೀಕ್ಷೆ ಮಾಡುತ್ತಿದ್ದಾರೆ. ಹಾಗೆಯೇ ಕಂಟ್ರೋಲರ್ ಆಫ್ ಸಿವಿಲ್ ಸಪ್ಲೈ ಇಲಾಖೆಗೆ ಸಂಬಂಧಪಟ್ಟದ್ದು ರೂಲ್ಸ್ ತಯಾರಾಗಿ ಅದು ಇಷ್ಟರಲ್ಲೇ ಬರುತ್ತದೆ ಎಂದು ಗೊತ್ತಾಗಿದೆ.

ಇನ್ನು ಪಬ್ಲಿಕ್ ಸರ್ವಿಸ್ ಕಮೀಷನ್ನಿನ ಸದಸ್ಯರಿಗೆ ಸಾಕಷ್ಟು ಕೆಲಸವಿಲ್ಲ ಎಂದು ಒಂದು ಪುಕಾರು ಇದೆ. ಅದು ಸ್ವಲ್ಪ ನಿಜ. ಮೂರನೇ ದರ್ಜೆಯ ನೌಕರರನ್ನು ನೇಮಕ ಮಾಡತಕ್ಕ ಕೆಲಸವನ್ನು ಪಬ್ಲಿಕ್ ಸರ್ವಿಸ್ ಕಮೀಷನ್ನಿಗೆ ವಹಿಸಿಕೊಡತಕ್ಕದ್ದು ಸರಿ ಎಂದು ಅನೇಕ ಕಡೆಗಳಿಂದ ಒತ್ತಾಯ ಬಂದಿದ್ದರಿಂದ ಅದನ್ನು ಮತ್ತೆ ಪಬ್ಲಿಕ್ ಸರ್ವಿಸ್ ಕಮೀಷನ್ನಿನವರಿಗೆ ವಹಿಸಿಕೊಟ್ಟಿದೆ. ಅವರಿಗೆ ಆ ಕೆಲಸವನ್ನು ವಹಿಸಿಕೊಟ್ಟು ಸುಮಾರು 8-9 ತಿಂಗಳು ಆಯಿತು. ಆದ್ದರಿಂದ ಪಬ್ಲಿಕ್ ಸರ್ವಿಸ್ ಕಮೀಷನ್ನಿನ ಸದಸ್ಯರಿಗೆ ಈಗ ಸಾಕಷ್ಟು ಕೆಲಸ ಇದೆ. ಅವರು ಸಾವಿರಾರು ಜನರನ್ನು ಕೆಲಸಕ್ಕೆ ಸೇರಿಸತಕ್ಕ ಕೆಲಸವನ್ನು ಮಾಡಬೇಕಾಗುತ್ತದೆ. ಅವರಿಗೆ ಎಷ್ಟು ಕೆಲಸವನ್ನು ಕೊಡಬೇಕಾಗಿತ್ತೋ ಅದಕ್ಕಿಂತ ಜಾಸ್ತಿ ಕೆಲಸವನ್ನು ಕೊಟ್ಟಿದೆ. ಆದ್ದರಿಂದ ಅವರಿಗೆ ಈಗ ಕೆಲಸ ಕಡಿಮೆ ಎಂದು ಹೇಳುವುದು ಸರಿಯಲ್ಲ.

ಆ ಮೇಲೆ, ಇನ್ನು ಪರೀಕ್ಷೆಗಳಲ್ಲಿ ಬಹಳ ಮಂದಿ ಉತ್ತೀರ್ಣರಾಗದೆ ಇರುವುದು ಏನಿದೆ ಅದು ಸರ್ವೇಸಾಧಾರಣವಾದ ಮಾತು. ಯೂನಿಯನ್ ಪಬ್ಲಿಕ್ ಸರ್ವಿಸ್ ಕಮೀಷನ್ನಿನವರೂ ಅದೇ ಹೇಳುತ್ತಾರೆ, ಮೈಸೂರಿನವರೂ ಅದೇ ಹೇಳುತ್ತಾರೆ. ಆದ್ದರಿಂದ ಪರೀಕ್ಷೆಗಳಲ್ಲಿ ಬಹಳ ಜನ ಅನುತ್ತೀರ್ಣರಾಗುತ್ತಾರೆ ಎಂದು ಹೇಳಿದರೆ ಅದಕ್ಕೆ ನಾವು

ಏನೂ ಮಾಡುವುದಕ್ಕಾಗುವುದಿಲ್ಲ. ಯಾರು ಪರೀಕ್ಷೆಯಲ್ಲಿ ಪಾಸಾಗುತ್ತಾರೆಯೋ ಅವರನ್ನು ಕೆಲಸಕ್ಕೆ ತೆಗೆದುಕೊಳ್ಳುತ್ತಾರೆ ಆ ರೀತಿ ಫೇಲಾಗುವುದಕ್ಕೆ ವಿದ್ಯಾಭ್ಯಾಸದ ಕ್ರಮದಲ್ಲಿ ಏನಾದರೂ ದೋಷವಿದೆಯೋ ಏನೋ ಗೊತ್ತಿಲ್ಲ. ಅದು ಸರ್ಕಾರದ ತಪ್ಪಲ್ಲ. ಆದ್ದರಿಂದ, ಅದಕ್ಕೆ ನಾವು ಏನೂ ಮಾಡುವುದಕ್ಕಾಗುವುದಿಲ್ಲ

ಸಾಧಾರಣವಾಗಿ ಸರಕಾರದವರು ಪಬ್ಲಿಕ್ ಸರ್ವಿಸ್ ಕಮೀಷನ್ನಿನವರು ಏನು ಹೇಳುತ್ತಾರೋ ಅದನ್ನು ಒಪ್ಪಿಕೊಳ್ಳುತ್ತೇವೆ. ಆದರೆ, ಅದಕ್ಕೆ ವಿರೋಧವಾಗಿ ಮಾಡಬೇಕಾದಾಗ ಏಕೆ ಮಾಡಬೇಕಾಗಿಬಂತು ಎನ್ನುವುದಕ್ಕೆ ಕಾರಣಗಳನ್ನು ಕೊಡುವುದು ಸರಕಾರದ ಕರ್ತವ್ಯ. ಇದರಲ್ಲಿರುವ ಮೆಮೊರ್‍ಯಾಂಡಂನಲ್ಲಿ ಸ್ಪಷ್ಟವಾಗಿ ಐದೇ ಐದು ಕೇಸುಗಳ ಬಗ್ಗೆ ಹೇಳಿದ್ದಾರೆ. ಇದನ್ನು ಮಾನ್ಯ ಸದಸ್ಯರೆಲ್ಲಾ ಓದಿದ್ದಾರೆ. ನಾನು ಅದನ್ನು ಪುನಃ ಇಲ್ಲಿ ಓದುವ ಅವಶ್ಯಕತೆ ಇದೆ ಎಂದು ನನಗೆ ಕಾಣುವುದಿಲ್ಲ. ಅವರು ಹೇಳಬೇಕಾದ ಅಭಿಪ್ರಾಯಗಳನ್ನು ಹೇಳಿದ್ದಾರೆ. ನಾವೂ ಕೂಡ ಅವರು ಕೊಟ್ಟ ಅಭಿಪ್ರಾಯಗಳನ್ನು ಯೋಚನೆ ಮಾಡಿಕೊಂಡು, ಅವನ್ನು ಒಪ್ಪಬಹುದಾದರೆ ಒಪ್ಪುತ್ತೇವೆ, ಇಲ್ಲದಿದ್ದರೆ ಇಲ್ಲ ಎನ್ನುವುದಕ್ಕೆ ಸಕಾರಣಗಳನ್ನು ಅವರಿಗೆ ತಿಳಿಸುತ್ತೇನೆ. ಅವರ ಅಭಿಪ್ರಾಯಗಳನ್ನು ಒಪ್ಪದೇ ಇರುವಂತಹ ಕೇಸುಗಳು ಇದರಲ್ಲಿ ಹೇಳಿರುವಂತೆ ಐದೇ ಐದು ಕೇಸುಗಳಲ್ಲಿ ಮಾತ್ರ. ಇದರಲ್ಲಿರುವಂತೆ ಗುಜರಾತಿನಲ್ಲಿದ್ದ ಕೆಲವರು ವೆಟರ್ನರಿ ಡಾಕ್ಟರುಗಳನ್ನು ಇಲ್ಲಿ ತೆಗೆದುಕೊಂಡಿದ್ದೇವೆ. ನಮ್ಮಲ್ಲಿ ವೆಟರ್ನರಿ ಹಾಗೂ ಮೆಡಿಕಲ್ ಗ್ರಾಜುಯೇಟುಗಳು ಸಾಕಷ್ಟು ಜನ ಸಿಗುತ್ತಿಲ್ಲ. ಅಲ್ಲದೆ ನಮ್ಮಲ್ಲಿ ಅನೇಕ ಕಡೆಗಳಲ್ಲಿ ದನಗಳ ಆಸ್ಪತ್ರೆಗಳು ಬೇಕು ಎಂದು ಜನ ಕೇಳುತ್ತಿದ್ದಾರೆ. ಸಾಕಷ್ಟು ಸಂಖ್ಯೆಯಲ್ಲಿ ದನಗಳ ವೈದ್ಯರು ನಮಗೆ ಬೇಕಾದುದರಿಂದ ಗುಜರಾತಿನಲ್ಲಿ ಕೆಲವರು ಮೈಸೂರಿನವರೇ ಇದ್ದರು. ಅವರು ಇಲ್ಲಿಗೆ ಬರುವ ಅಭಿಪ್ರಾಯ ವ್ಯಕ್ತ ಮಾಡಿದರು. ಅಂತಹ ವೈದ್ಯರುಗಳು ಕೆಲವು ಕಡೆಗಳಲ್ಲಿ ಅವಶ್ಯಕತೆ ಇದ್ದುದರಿಂದ ಇವರನ್ನು ಇಲ್ಲಿ ನೇಮಕ ಮಾಡಿಕೊಳ್ಳುವುದು ಅನಿವಾರ್ಯವಾಗಿ ಬಂತು. ಅವರೂ ಮೈಸೂರಿನವರೇ ಆಗಿದ್ದುದರಿಂದ ಅವರನ್ನು ಇಲ್ಲಿ ಕೆಲಸ ಮಾಡಲು ತೆಗೆದುಕೊಂಡಿದ್ದೇವೆ. ಇದೇನೂ ಅಂತಹ ತಪ್ಪು ಎಂದು ನನಗೆ ಕಾಣುತ್ತಿಲ್ಲ. ಇದಕ್ಕಾಗಿ ಕೆಲವು ರೂಲ್ಸ್‌ಗಳನ್ನು ಇಲ್ಲಿ ತಿದ್ದುಪಡಿ ಮಾಡಿ ಅಂತಹವರನ್ನು ಇಲ್ಲಿ ತೆಗೆದುಕೊಳ್ಳುವುದು ನಮ್ಮ ಕರ್ತವ್ಯ ಎಂದು ಇಲ್ಲಿ ಆ ಡಾಕ್ಟರುಗಳನ್ನು ನೇಮಕ ಮಾಡಿದೆವು. ಇವರ ಅವಶ್ಯಕತೆ ಬಹಳ ಹೆಚ್ಚಾಗಿಯೂ ಇತ್ತು. ಅವಶ್ಯಕತೆಗಳು ಬಂದಾಗ ಮಾತ್ರ ರೂಲ್ಸ್‌ಗಳನ್ನು ಬದಲಾವಣೆ ಮಾಡಬೇಕಾದಾಗ, ಮಾಡಬೇಕಾಗಿ ಬರುತ್ತದೆ. ಇದರಿಂದ ನಮ್ಮ ಜನರಿಗೂ ಅನುಕೂಲವಾಗುತ್ತದೆ ಎಂದು ಇಲ್ಲಿ ಮಾಡಬೇಕಾಗಿ ಬಂತು. ವೆಟರ್ನರಿ ಡಾಕ್ಟರುಗಳ ಅವಶ್ಯಕತೆಯೂ ಇತ್ತು ಎಂದು ಮಾಡಲಾಗಿದೆ. ಎಲ್ಲ ಸಂದರ್ಭಗಳಲ್ಲಿಯೂ ರೂಲ್ಸ್‌ಗಳನ್ನು ಬದಲಾವಣೆ ಮಾಡಿದರೆ ಅದಕ್ಕೆ ಬೆಲೆ ಬರುವುದಿಲ್ಲ. ಸಾಧಾರಣವಾಗಿ ಅವರು ಟೀಕೆ ಮಾಡುವಂತೆ ಮಾಡಿದ್ದಾರೆ. ಇದರಲ್ಲಿ ಏನಾಗಿದೆಎನ್ನುವುದನ್ನು ನಾವು ಹೇಳುವಾಗ ಅದನ್ನು ತಾವು ಒಪ್ಪಿಕೊಳ್ಳುವಷ್ಟು ಸಹೃದಯರಾಗಿರಬೇಕು. ಇದರ ಬಗ್ಗೆ ಇಲ್ಲಿ ಮಾನ್ಯ ಸದಸ್ಯರು ಬಹಳ ದೊಡ್ಡದಾಗಿ ಟೀಕೆ ಮಾಡಿದರು. ನಮಗೆ ಡಾಕ್ಟರುಗಳ

ಅವಶ್ಯಕತೆ ಇತ್ತು. ಆದರಿಂದ ನಾವು ನೇಮಕ ಮಾಡಿದೆವು. ಸಾಮಾನ್ಯವಾಗಿ ಪಬ್ಲಿಕ್ ಸರ್ವಿಸ್ ಕಮೀಷನ್ನು ರಿಪೋರ್ಟುಗಳ ಮೇಲೆ ಯಾರೂ ಹೆಚ್ಚಾಗಿ ಟೀಕೆ ಮಾಡುವುದಕ್ಕೆ ಹೋಗುವುದಿಲ್ಲ. ಅವರು ಉಪಯೋಗಿಸತಕ್ಕ ಭಾಷೆ ಕೂಡ ತೀಕ್ಷ್ಣವಾಗಿದೆ ಎಂದು ಯಾರು ಇಲ್ಲಿ ಹೇಳುವುದಕ್ಕೆ ಹೋಗುವುದಿಲ್ಲ.

## ಸರಕಾರದ ಖರ್ಚು ಕಡಿಮೆ ಮಾಡುವುದರ ಬಗ್ಗೆ ಚರ್ಚೆ
## 23ನೇ ಮಾರ್ಚ್ 1957

ಸರ್ಕಾರ ನಡೆಸುತ್ತಿರುವ ಆಡಳಿತದ ಬಾಬುಗಳಲ್ಲಿ ಅನವಶ್ಯಕವಾದ ಖರ್ಚು ವೆಚ್ಚಗಳನ್ನು ಕಡಿಮೆ ಮಾಡಬೇಕೆಂದು ಹೇಳಿರತಕ್ಕದ್ದನ್ನು ಎಲ್ಲರೂ ಒಪ್ಪಲೇಬೇಕಾಗಿದೆ. ಎಲ್ಲೆಲ್ಲಿ ಆ ರೀತಿ ಅನವಶ್ಯಕ ವೆಚ್ಚಗಳಿರುತ್ತವೋ, ಅಂಥವುಗಳನ್ನು ನಿಲ್ಲಿಸಿ, ಸರ್ಕಾರಕ್ಕೆ ಬರಬೇಕಾದ ಆದಾಯವನ್ನು ಹೆಚ್ಚಿಸಬೇಕಾದದ್ದು ಅತ್ಯಗತ್ಯ. ಆದರೆ ನಮ್ಮ ಹೊಸ ರಾಜ್ಯ ಇನ್ನೂ ಈಗ ತಾನೇ ಉದಯವಾಗಿದೆ, ಇದೇ ಸಂದರ್ಭದಲ್ಲಿ ಈ ಪ್ರಶ್ನೆಯನ್ನು ಬಗೆಹರಿಸಬೇಕೆಂದರೆ ಇದೇನೂ ಅಷ್ಟು ಸುಲಭ ಸಾಧ್ಯವಾದ ವಿಚಾರವಲ್ಲ. ಈ ಪ್ರಶ್ನೆ ಬಹಳ ತೊಡಕಿನದಾಗಿದೆ. ಈಗ ಉದಯವಾಗಿರುವ ನವ ಮೈಸೂರು ರಾಜ್ಯ ಬೇಕಾದಷ್ಟು ನೈಸರ್ಗಿಕ ಸಂಪತ್ತುಗಳಿಂದ ಕೂಡಿದ್ದಾಗಿದೆ. ಇದರ ವೈವಿಧ್ಯತೆಗಳನ್ನು ನಾವಿನ್ನೂ ನೋಡಬೇಕಾಗಿದೆ. ಆದರೆ, ಹೊಸದಾಗಿ ಏರ್ಪಟ್ಟ ರಾಜ್ಯಗಳಲ್ಲಿ ನಮ್ಮ ರಾಜ್ಯ ಹೆಚ್ಚಿನ ಅನುಕೂಲಗಳನ್ನು ಪಡೆದುಕೊಂಡಿದೆಯೆಂಬುದು ನಾವು ಗ್ರಹಿಸಬೇಕಾಗಿದೆ. ಆ ಕಾರಣದಿಂದ ನಾವೀಗ ಹೆಚ್ಚಿನ ಅನುಕೂಲತೆಗಳ ಪ್ರಯೋಜನವನ್ನು ಹೊಂದಲು ಹೆಚ್ಚಾಗಿ ಖರ್ಚುಮಾಡಬೇಕಾಗಿದೆ ಎಂದರೆ ಅದನ್ನು ಎಲ್ಲ ಮಾನ್ಯ ಸದಸ್ಯರೂ ಒಪ್ಪುತ್ತಾರೆಂದು ಭಾವಿಸುತ್ತೇನೆ. ಆದರೆ ಸರ್ಕಾರ ಅನವಶ್ಯಕವಾದ ಖರ್ಚುಗಳನ್ನು ಕಡಿಮೆ ಮಾಡಬೇಕೆಂದು ಅನೇಕ ಸಲಹೆಗಳನ್ನು ಕೊಡ್ಡಿದ್ದಾರೆ. ಎಲ್ಲೆಲ್ಲಿ ಅನವಶ್ಯಕ ಖರ್ಚು ವೆಚ್ಚಗಳಾಗುತ್ತವೆ ಎಂಬುದನ್ನು ಕೂಡ ತಿಳಿಸಿದ್ದಾರೆ. ಈ ಪ್ರತಿಯೊಂದು ಅಂಶವನ್ನೂ ಸರ್ಕಾರದವರು ತಮ್ಮ ಗಮನಕ್ಕೆ ತೆಗೆದುಕೊಂಡಿರುತ್ತಾರೆಂದು ತಿಳಿಸಲಿಚ್ಛಿಸುತ್ತೇನೆ. ಇನ್ನು ಸರ್ಕಾರಿ ಕೆಲಸ ಕಾರ್ಯಗಳಿಗೆ ಯಾವ ರೀತಿಯಿಂದಲೂ ಕುಂದು ಬಾರದಂತೆ ಕೆಲಸ ಕಾರ್ಯಗಳು ಹೇಗೆ ನಡೆಯಬೇಕೋ ಆ ರೀತಿ ಒಂದು ಏರ್ಪಾಡನ್ನು ಮಾಡಬೇಕೆಂದು ಹೇಳಿದ್ದಾರೆ. ಈ ವಿಚಾರವನ್ನೂ ಸಹ ಒಪ್ಪಲೇಬೇಕು. ಹೀಗಾಗಬೇಕಾದರೆ ಸರ್ಕಾರಿ ನೌಕರಿಗಳಲ್ಲಿರತಕ್ಕ ಕೆಳದರ್ಜೆ ನೌಕರರ ಸಂಬಳ ಸಾರಿಗೆಗಳನ್ನು ಹೆಚ್ಚಿಸತಕ್ಕದ್ದು ಅತ್ಯಾವಶ್ಯಕ. ಈ ಸಂಬಳ ಸಾರಿಗೆಗಳನ್ನು ಕಡಿಮೆ ಮಾಡಿದರೆ ದಕ್ಷತೆಗೆ ಕುಂದು ಉಂಟಾಗುತ್ತದೆಂಬ ಅಂಶ ಎಲ್ಲರಿಗೂ ತಿಳಿದಿರತಕ್ಕದೇ ಆಗಿದೆ. ಈ ಕಾರಣದಿಂದ ಸರ್ಕಾರ ಈಗ ಸಂಬಳ ಸಾರಿಗೆಗಳನ್ನೆಲ್ಲಾ ಹೆಚ್ಚು ಮಾಡಬೇಕಾಗಿ ಬಂದಿತು. ಇದೇ ರೀತಿಯಾಗಿ ಚಿಕ್ಕದಾಗಿದ್ದ ಇಲಾಖೆಗಳನ್ನು ದೊಡ್ಡದಾಗಿ ಮಾಡಬೇಕಾಗಿ ಬಂದಿತ್ತು. ಹಿಂದೆ ನಮ್ಮ ಸಂಸ್ಥಾನ ಒಂದು ಪೋಲೀಸ್ ಸ್ಟೇಟ್ ಆಗಿತ್ತು. ಆದರೆ ಈ ದಿವಸ ಇದೊಂದು ವೆಲ್‌ಫೇರ್ ಸ್ಟೇಟ್ ಆಗಿದೆ, ಎಂದರೆ ಒಂದು ಸುಖೀ ರಾಜ್ಯವಾಗಿದೆ. ನಾವು ಈ ದಿವಸ ನಮ್ಮ ದೇಶದ ಜನಗಳಿಗೆ ಹೆಚ್ಚು ಹೆಚ್ಚು ಅನುಕೂಲತೆಗಳನ್ನು ಮಾಡಬೇಕಾಗಿದೆ. ಆದರಿಂದ ನಮ್ಮ ಖರ್ಚು ದಿನದಿನಕ್ಕೂ ಹೆಚ್ಚಾಗುತ್ತಿದೆ. ನಮ್ಮ ದೇಶದಲ್ಲಿ ಸಂಪತ್ತು ಅಭಿವೃದ್ಧಿಯಾಗಬೇಕಾಗಿದ್ದರೆ, ನಾವು ದೇಶಾಭಿವೃದ್ಧಿ ಕಾರ್ಯಗಳಿಗೆ ಮತ್ತು ಸಂಪದಭಿವೃದ್ಧಿ ಕಾರ್ಯಗಳಿಗೆ ಹೆಚ್ಚು ಹೆಚ್ಚಾಗಿ ಗಮನ ಕೊಡಲೇಬೇಕು. ಈ ವಿಚಾರಗಳಲ್ಲೆಲ್ಲಾ ಈಗಾಗಲೇ ಸರ್ಕಾರದವರು ಪರಿಶೀಲನೆಗಳನ್ನು ತೀವ್ರವಾಗಿ ನಡೆಸುತ್ತಿದ್ದಾರೆ. ಈ ಕಾರಣದಿಂದ ಈಗ

---

ವಿ.ಪ.ನಡವಳಿಕೆ: ದಿ. 23.3.57 ಪುಟ 190-191

ಪ್ರತಿಯೊಂದು ಇಲಾಖೆಯೂ ಹೆಚ್ಚಿನ ಕೆಲಸ ಕಾರ್ಯಗಳನ್ನು ನಿರ್ವಹಿಸಬೇಕಾಗಿರುತ್ತದೆ. ಅನೇಕ ಭಾರಿಭಾರಿ ಉದ್ಯಮಗಳನ್ನು ಕೈಗೊಳ್ಳಬೇಕೆಂದು ಆಲೋಚನೆಗಳನ್ನು ಮಾಡುತ್ತಿದ್ದೇವೆ. ತರೀ ಜಮೀನುಗಳ ವಿಸ್ತೀರ್ಣವನ್ನು ಹೆಚ್ಚು ಮಾಡಲು ಕಾರ್ಯಕ್ರಮಗಳನ್ನು ಹಾಕಿಕೊಂಡಿದ್ದೇವೆ. ಈ ರೀತಿ ನಾವು ಕೈಗೊಳ್ಳುವ ನಾನಾ ಮಾರ್ಗಗಳಿಂದಲೂ ಸರ್ಕಾರಕ್ಕೆ ಹೆಚ್ಚಿನ ವರಮಾನ ಬಂದೇಬರುತ್ತದೆ. ಆದರೆ ನಾವು ಸ್ವಲ್ಪ ಕಾಲ ಕಾಯಬೇಕಾಗಿದೆ. ಆದರೆ ಹಿಂದಿದ್ದ ಸ್ಥಿತಿಗಳು ಈ ದಿವಸ ಇರುವುದಿಲ್ಲ. ಇಂದಿನ ಸ್ಥಿತಿ ನಾಳೆಗೆ ಬದಲಾಯಿಸಬಹುದು. ಆದ ಕಾರಣ ಇಂಥ ಬದಲಾವಣೆಯ ಕಾಲದಲ್ಲಿ ಖೋತಾ ಮಾಡತಕ್ಕಂಥಾದದ್ದು ಬಹಳ ಕ್ಲಿಷ್ಟಕರವಾದ ಪ್ರಶ್ನೆ. ಆದಾಗ್ಯೂ ತಾವುಗಳೆಲ್ಲರೂ ಏನೇನು ಸಲಹೆಗಳನ್ನು ನೀಡಿದ್ದೀರೋ ಅವುಗಳನ್ನೆಲ್ಲ ನಾನು ಗಮನದಲ್ಲಿಟ್ಟುಕೊಂಡಿದ್ದೇನೆ. ಅವಶ್ಯಕ ಮತ್ತು ಅಗತ್ಯವಿರುವ ಕಡೆಗಳಲ್ಲಿ ಮಾತ್ರ ಖರ್ಚುಮಾಡಿ, ಅನಾವಶ್ಯಕ, ಅನಗತ್ಯವಾದ ಖರ್ಚುಗಳನ್ನು ಕಮ್ಮಿ ಮಾಡತಕ್ಕ ಉದ್ದೇಶವನ್ನು ಸರ್ಕಾರ ತನ್ನ ದಿನವಹಿ ಕಾರ್ಯಗಳಲ್ಲಿ ಯಾವತ್ತೂ ಅನುಸರಿಸುತ್ತಲೇ ಬಂದಿದೆ. ಆದರೆ ಅನಿವಾರ್ಯವಾಗಿ ಇತ್ತೀಚೆಗೆ ಕೆಲವು ಇಲಾಖೆಗಳಲ್ಲಿ ಖರ್ಚು ಹೆಚ್ಚಾಗಿರಬಹುದು. ಆದರೆ ಅವುಗಳಿಗೆಲ್ಲ ಉತ್ತರ ಕೊಡಬೇಕಾದಂಥ ಅಗತ್ಯ ಅಷ್ಟಾಗಿರುವುದಿಲ್ಲ. ಇಂಥ ವಿಚಾರಗಳು ಆಗಿಂದಾಗ್ಗೆ ಸರ್ಕಾರದವರ ಗಮನಕ್ಕೆ ತರಲ್ಪಡುತ್ತಲೇ ಇವೆ. ಆದರೆ ಶ್ರೀ ಪಾಲಹಳ್ಳಿ ಸೀತಾರಾಮಯ್ಯನವರ ನಿರ್ಣಯದಲ್ಲಿರುವ ತತ್ವವನ್ನು ಎಲ್ಲರೂ ಒಪ್ಪಿಕೊಂಡಿದ್ದಾರೆ. ಅಷ್ಟಕ್ಕಾಗಿ ಇಂಥ ಒಂದು ನಿರ್ಣಯವನ್ನು ತರಬೇಕಾದಂಥ ಅಗತ್ಯವೇನಿರಲಿಲ್ಲ. ಕಾರಣವೇನೆಂದರೆ ಈ ವಿಚಾರಗಳೆಲ್ಲಾ ಪ್ರತಿದಿನವೂ ಸರ್ಕಾರದವರ ಪರಿಶೀಲನೆಯಲ್ಲಿದ್ದೇ ಇರುತ್ತವೆ. ಈ ವಿಚಾರಗಳು ಯಾವತ್ತೂ ಸರ್ಕಾರದ ಗಮನದಲ್ಲಿದ್ದೇ ಇರುತ್ತವೆ. ಇದಕ್ಕೇನೂ ಸರ್ಕಾರದಿಂದ ಅಂಥ ಒಂದು ದೀರ್ಘವಾದ ಉತ್ತರ ಕೊಡಬೇಕಾದ್ದಿಲ್ಲ, ಅವರ ನಿರ್ಣಯದಲ್ಲಿರುವ ತತ್ವಕ್ಕೇನೂ ನಮ್ಮ ವಿರೋಧವಿಲ್ಲ. ಅದನ್ನು ನಾವು ಒಪ್ಪಿಕೊಳ್ಳಲು ಸದಾ ಸಿದ್ಧರಾಗಿದ್ದೇವೆ.

ನಮ್ಮ ಡಿಸ್ಟ್ರಿಕ್ಟ್ ಹೀಗೆಯೇ ಡಿಸ್ಟ್ರಿಕ್ಟು ಆಗಿ ಇರಬೇಕು, ನಮ್ಮ ತಾಲ್ಲೂಕು ಹೀಗೆಯೇ ತಾಲ್ಲೂಕಾಗಿರಬೇಕು ಎಂದು ಹೇಳುವ ಜನರು ನಮ್ಮಲ್ಲನೇಕರಿದ್ದಾರೆ. ಇದರಿಂದ ಏನು ಪರಿಣಾಮವಾಗುತ್ತದೆಂದು ಈಗ ಹೇಳುವುದಕ್ಕಾಗುವುದಿಲ್ಲ. ಕೆಲವು ಜಿಲ್ಲೆಗಳು ಸಣ್ಣದಾಗಿವೆ, ಇವುಗಳನ್ನು ದೊಡ್ಡದು ಮಾಡಬೇಕಾದುದು ಅವಶ್ಯಕ. ಕೆಲವನ್ನು ಸ್ವಲ್ಪ ಸಣ್ಣದಾಗಿಯೂ ಮಾಡಬೇಕಾಗಬಹುದು. ಈಗ ನಮ್ಮ ರಾಜ್ಯದಲ್ಲಿ 19 ಜಿಲ್ಲೆಗಳಿವೆ, ಇವುಗಳಲ್ಲಿ ಯಾವ ಯಾವುದಕ್ಕೆ ಯಾವ ಯಾವುದರ ಭಾಗಗಳನ್ನು ಸೇರಿಸಿ ಸಂಖ್ಯೆಯನ್ನು ಕಡಿಮೆ ಮಾಡಬೇಕೆಂಬುದನ್ನು ಈಗಾಗಲೇ ಹೇಳುವುದಕ್ಕಾಗುವುದಿಲ್ಲ, ಈ ವಿಷಯ ನಮ್ಮ ...ವದಲ್ಲಿದೆ, ಖರ್ಚನ್ನು ಕಡಿಮೆಮಾಡುವುದಕ್ಕೆ ತಕ್ಕ ಏರ್ಪಾಡುಗಳನ್ನು ಯೋಚನೆ ...ೇವೆ.

## ಮಹಾರಾಷ್ಟ್ರದೊಂದಿಗೆ ಗೋವಾದ ವಿಲೀನ ಕುರಿತು ಮಹಾರಾಷ್ಟ್ರ ವಿಧಾನಸಭೆಯ ನಿರ್ಣಯದ ಮೇಲೆ ಮೈಸೂರು ವಿಧಾನ ಪರಿಷತ್‌ನಲ್ಲಿ ಒಂದು ಚರ್ಚೆ

## 12ನೇ ಮಾರ್ಚ್ 1965.

ಮಹಾರಾಷ್ಟ್ರ, ಶಾಸನ ಸಭೆಯು ರೆಸಲ್ಯೂಷನ್ ಮಂಡಿಸುವ ತೀರ್ಮಾನ ಕೈಗೊಂಡ ಆಲೋಚನೆಯು ಬಹಳ ದುರದೃಷ್ಟಕರವಾಗಿದೆ. ಅದೂ ಕೇವಲ, ಗೋವ ಶಾಸಕಾಂಗವು ಒಂದು ಮತದ ಬಹುಮತದಿಂದ ಮಂಡಿಸಿದ ಆಧಾರವಾಗಿ ಇದು ನನ್ನ ತಿಳುವಳಿಕೆಯ ಹೊರಗೆ ಉಳಿದ ವಿಷಯವಾಗಿದೆ.

ಗೋವಾ ರಾಜ್ಯವು ಡಿಸೆಂಬರ್ 1961ರಲ್ಲಿಯೇ ನ್ಯಾಯ ಸಮ್ಮತವಾಗಿ ಭಾರತದ ಹೆಮ್ಮೆಯ ಭಾಗವಾಗಿದೆ. ಗೋವಾದಲ್ಲಿ ಚುನಾವಣೆ ನಡೆದದ್ದು ಅಲ್ಲಿನ ಜನರು ಮಹಾರಾಷ್ಟ್ರಕ್ಕಾಗಲಿ, ಮೈಸೂರಿಗಾಗಲೀ ಸೇರಲೆಂದಲ್ಲ. ಬದಲಾಗಿ, ಶತಮಾನಗಳಿಂದ ವಿದೇಶಿ ಆಳ್ವಿಕೆಗೆ ಒಳಪಟ್ಟ ಈ ಜನರಿಗೆ ಪ್ರಜಾಪ್ರಭುತ್ವ ಮತ್ತು ಪ್ರಜಾಸತ್ತಾತ್ಮಕ ಆಳ್ವಿಕೆಯ ಪರಿಚಯ ಆದಷ್ಟು ಬೇಗ ಆಗಬೇಕೆಂದು ಭಾರತ ಸರ್ಕಾರ ಮತ್ತು ಭಾರತದ ಜನರ ಆಲೋಚನೆಯಾಗಿತ್ತು.

ಭಾರತದ ಒಂದು ಭಾಗವಾಗಿ, ತಮ್ಮ ಚುನಾವಣೆಯನ್ನು ನಡೆಸಿಕೊಳ್ಳುವ ಅವಕಾಶವನ್ನು ಕೊಟ್ಟ ನಂತರವೂ ಗೋವಾದ ಜನರನ್ನು ಅತ್ತ ಇತ್ತ ಎಳೆದಾಡುವುದು ಒಂದು ರಾಜಕೀಯ ಪಾಪ. ಅದನ್ನು ನನ್ನಿಂದ ಸಹಿಸಲಾಗುವುದಿಲ್ಲ. ಅವರು ಮಹಾರಾಷ್ಟ್ರವನ್ನು ಸೇರುತ್ತಾರೋ ಅಥವಾ ಕರ್ನಾಟಕವನ್ನು ಸೇರುತ್ತಾರೋ ಎಂಬ ವಿಷಯದ ಬಗ್ಗೆ ನನಗೆ ಹೆಚ್ಚಿನ ಆಸಕ್ತಿ ಇಲ್ಲ. ಆದರೆ, ಆವರನ್ನು ಒಂದು ಪ್ರಜಾಪ್ರಭುತ್ವಕ್ಕೆ ಯೋಗ್ಯವೆನಿಸುವ ಪೌರರಂತೆ ಜೀವಿಸಲು ಬಿಡಬೇಕು. ಅವರು ಈಗ ತಾನೆ ಪ್ರಜಾಪ್ರಭುತ್ವ ಆಳ್ವಿಕೆಯನ್ನು ಸವಿಯುತ್ತಿದ್ದಾರೆ. ಆದರಿಂದ ಈ, ಎಳೆದಾಟ ನಿಜಕ್ಕೂ ಪಾಪ ಕೃತ್ಯವೇ. ಮಹಾರಾಷ್ಟ್ರದ ರೆಸಲ್ಯೂಷನ್ ಚರಿತ್ರೆ, ಸಂತತಿ, ಭೂಗೋಳ, ಆರ್ಥಿಕ ಅಂಶಗಳ ಬಗ್ಗೆ ಪ್ರಸ್ತಾವ ಮಾಡುತ್ತದೆ. ಈ ಎಲ್ಲಾ ದೃಷ್ಟಿಕೋನಗಳಿಂದ ಗಮನಿಸಿದಾಗ, ಗೋವಾವನ್ನು ಪಡೆದುಕೊಳ್ಳಲು ಮಹಾರಾಷ್ಟ್ರಕ್ಕೆ ಖಂಡಿತವಾಗಿ ಯಾವುದೇ ಅಧಿಕಾರವಿಲ್ಲ. ನಮ್ಮ ಉತ್ತರ ಕನ್ನಡ ಮತ್ತು ದಕ್ಷಿಣ ಕನ್ನಡದ ಸಾರಸ್ವತರು ಮತ್ತು ಗೌಡ ಸಾರಸ್ವತರು ಮದುವೆಯ ನಂತರ ಗೋವಾಕೆ ಹೋಗುತ್ತಾರೆ. ಕಾರಣ, ಕೊಂಕಣಿ ಭಾಷೆ ಮಾತನಾಡುವ ಜನರ ದೇವಾಲಯಗ ಗೋವಾದಲ್ಲಿವೆ. ಮದುವೆಯ ನಂತರ ಎಷ್ಟು ಜನ ಮಂಗೇಶ ದೇವಾಲಯಕೆ ನೀಡುತ್ತಾರೆಂದು ನಾನು ಮಹಾರಾಷ್ಟ್ರದ ಜನರನ್ನು ಕೇಳುಬಯಸುತ್ತೇನೆ. ಹೋಗುವುದಿಲ್ಲ. ಧಾರ್ಮಿಕ ಅಥವಾ ಸಾಂಸತಿಕ ಬಾಂಧವ್ಯದ ಪ್ರಶ್ನೆಯಂತೂ ಇಲ್ಲ. ಭೌಗೋಳಿಕವಾಗಿ ಹೇಳುವುದಾದರೆ, ಮೈಸೂರು, ಗೋವಾವನ್ನು

---

ವಿ.ಪ.ನಡವಳಿಕೆ: ದಿ. 12.2.65 ಪುಟ 38-40

ರಷ್ಟು ಸುತ್ತುವರಿದಿದೆ. ಆದರೆ ಗೋವಾದ ಅತಿ ಚಿಕ್ಕ ಉತ್ತರ ಭಾಗವು ಮಹಾರಾಷ್ಟ್ರದ ಪಕ್ಕದಲ್ಲಿದೆ. ಗೋವಾದ ಭೌಗೋಳಿಕ ಲಕ್ಷಣಗಳು ನಮ್ಮ ಉತ್ತರ ಕನ್ನಡ ಮತ್ತು ದಕ್ಷಿಣ ಕನ್ನಡದಂತೆಯೇ ಇವೆ. ಅದು ಮಲೆನಾಡಿನ ಒಂದು ಬಾಗವಾಗಿದೆ. ಈ ಎರಡು ಪ್ರದೇಶಗಳ ಪ್ರಕೃತಿಯೂ ಉತ್ತಮ ಮಟ್ಟದ ಕಬ್ಬಿಣ ಅದಿರು, ಅರಣ್ಯ ಸಂಪತ್ತು ಮತ್ತು ಜಲ ನಿಂದ ಕೂಡಿದ್ದು ಒಂದೇ ರೀತಿಯಾಗಿದೆ. ಆರ್ಥಿಕವಾಗಿ ಗೋವಾ ಕರ್ನಾಟಕದ ಹೆಬ್ಬಾಗಿಲು ಆಗಿದೆ. ಕರ್ನಾಟಕ ದಿಂದ ಉತ್ಪಾದನೆ ಆಗುವ ಬಹುಪಾಲು ಆಮದು ಗೋವಾ ಬಂದರಿನಿಂದಾಗಿದೆ.

ಭಾಷಾವಾರು ಅವರು ಹೇಳಿ ಕೊಳ್ಳುವಂತೆ ಕೊಂಕಣಿ ಮರಾಠಿ .......... ಮಿತ್ರರು ಸರಿಯಾಗಿ ಹೇಳಿರುವಂತೆ ಕೊಂಕಣಿ ಭಾಷೆಯು ಮರಾಠಿ ಭಾಷೆಗಿಂತ ಮುಂಚಿನಿಂದಲೂ ಇದೆ. ಆ ಭಾಷೆಯು ಕನ್ನಡಕ್ಕೆ ಸರಿಸಮಾನವಾಗಿದೆ ಎಂದು ನಾನು ಹೇಳುತ್ತಿಲ್ಲ. ಕೊಂಕಣಿ ಭಾಷೆಯನ್ನು ಆ ಜನರು ಮಾತನಾಡುತ್ತಾರೆ. ಹಾಗಿದ್ದಾಗ, ಗೋವಾ ಮಹಾರಾಷ್ಟ್ರಕ್ಕೆ ಸೇರಿದ್ದೆಂದು ಹೇಳುವ ಅಧಿಕಾರ ಮಹಾರಾಷ್ಟ್ರಕ್ಕೆ ಏನಿದೆ? 1991ರ ಜನಗಣತಿಯ ಪ್ರಕಾರ ಗೋವಾದ ಜನಸಂಖ್ಯೆ ಸುಮಾರು 6 ಲಕ್ಷಗಳು, ಗೋವಾದ ಹೊರಗೆ ಕೊಂಕಣಿ ಮಾತನಾಡುವ ಜನರ ಒಟ್ಟು ಜನಸಂಖ್ಯೆ 1951ರ ಜನಗಣತಿಯ ಪ್ರಕಾರ ಸುಮಾರು 7 ಲಕ್ಷಗಳು. ಅಂದರೆ ಸಾಕಷ್ಟು ಜನ ಗೊವಾದ ಹೊರಗೆ ಉಳಿದಿದ್ದಾರೆ. ಆದರೆ, ಅವರು ಹೇಗೆ ಹಂಚಿಹೋಗಿದ್ದಾರೆ ? ಮೈಸೂರಿನಲ್ಲಿ ಸುಮಾರು ಐದು ಲಕ್ಷ, ಬೊಂಬಾಯಿ ನಗರದಲ್ಲಿ ಒಂದೂವರೆ ಲಕ್ಷ, ಕೇರಳದಲ್ಲಿ ಅರ್ಧ ಲಕ್ಷ, ಕೊಂಕಣಿ ಮಾತನಾಡುವ ಜನರ ಸಾಕಷ್ಟು ಸಾಂದ್ರತೆ ಮೈಸೂರಿನಲ್ಲಿದೆ. ಕೊಂಕಣಸ್ಥ ಜನರು ಬಹಳ ಕಡಿಮೆ ಮಹಾರಾಷ್ಟ್ರದಲ್ಲಿದ್ದಾರೆ. ಅದೂ, ಕೇವಲ ಬೊಂಬಾಯಿ ನಗರದಲ್ಲಿ ಮಾತ್ರ. ಬೊಂಬಾಯಿಯಲ್ಲಿ ಇರುವ ಸುಮಾರು ಒಂದೂವರೆ ಲಕ್ಷ ಜನರಲ್ಲಿ ಸುಮಾರು ಮೂರನೇ ಒಂದು ಭಾಗ ದಕ್ಷಿಣ ಕನ್ನಡ ಮತ್ತು ಉತ್ತರ ಕನ್ನಡದಿಂದ ಹೋದವರಾಗಿದ್ದಾರೆ.

1962ರಲ್ಲಿ ಮಹಾರಾಷ್ಟ್ರ ಸರ್ಕಾರವು ಗೋವಾದ ಕೇಂದ್ರಿಯ ಆಡಳಿತವನ್ನು ನಡೆಸಲು ಸಾಧ್ಯವಾದಷ್ಟು ಸಂಖ್ಯೆಯಲ್ಲಿ ಅಧಿಕಾರಿಗಳನ್ನು ಕಳುಹಿಸಲು ಪ್ರಯತ್ನಿಸಿದಾಗ ದಿವಂಗತ ಪ್ರಧಾನಿಯವರಿಗೆ ನಾನು ಒಂದು ಪತ್ರ ಬರೆದಿದ್ದೆ. ನನ್ನ ಪತ್ರದಲ್ಲಿ ಆದಷ್ಟು ಮಟ್ಟಿಗೆ ಮೈಸೂರಿನ ಅಧಿಕಾರಿಗಳನ್ನಾಗಲೀ, ಮಹಾರಾಷ್ಟ್ರದ ಅಧಿಕಾರಿಗಳನ್ನಾಗಲೀ ಕಳುಹಿಸಬಾರದೆಂದು ಮನವಿ ಮಾಡಿದ್ದೆ. ಅದರ ಬದಲಿಗೆ ಉತ್ತರ ಭಾರತದ ಅಧಿಕಾರಿಗಳು ಆ ಕಾರ್ಯ ನಿರ್ವಹಿಸಿದಲ್ಲಿ ಅವರು ಯಾವ ಜನಕ್ಕೂ ತೊಂದರೆಯಾಗದಂತೆ ನಿಸ್ವಾರ್ಥವಾಗಿ ಕಾರ್ಯ ನಿರ್ವಹಿಸುತ್ತಾರೆಂದು ಮನವಿ ಮಾಡಿದ್ದೆ.

ಈ ಅವಿವೇಚನೆ ಮತ್ತು ಕೂಗಾಟಕ್ಕೆ ಉತ್ತಮ ಮನ್ನಣೆ ದೊರೆಯುತ್ತಿದ್ದು, ಸೌಜನ್ಯ ಮತ್ತು ವಿವೇಚನೆ, ಭಾರೀ ರಿಯಾಯಿತಿಯಲ್ಲಿದೆ ಎಂಬ ಭಾವನೆ ಸದನದ ಸದಸ್ಯರಿಂದ

ಕೇಳಿ ಬರುತ್ತಿದೆ. ಈ ದೇಶದ ಜವಾಬ್ದಾರಿಯುತ ಸ್ಥಾನಗಳಲ್ಲಿ ಕುಳಿತಿರುವ ವ್ಯಕ್ತಿಗಳು ಎಂದಿಗೂ ವಿವೇಚನೆಗೆ ಮನ್ನಣೆ ಕೊಡಬೇಕೇ ಹೊರತು, ಅವಿವೇಚನೆಗಲ್ಲ ಎಂಬುದನ್ನು ಅರಿಯಬೇಕು. ಗೋವಾದ ಭವಿಷ್ಯವನ್ನು ಗೋವಾದವರೇ ತೀರ್ಮಾನಿಸಬೇಕೆಂಬುದನ್ನು ಹೇಳುವುದು ಬಿಟ್ಟರೆ ನಾನು ಹೇಳುವುದೇನಿಲ್ಲ. ನಾವೆಲ್ಲರೂ ಒಂದೇ ದೇಶದವರಾಗಿದ್ದಾಗ, ಅವರು ಮಹಾರಾಷ್ಟ್ರಕ್ಕೆ ಅಥವಾ ಕರ್ನಾಟಕದತ್ತ ಒಲವು ತೋರಿಸುತ್ತಾರೋ ಅದು ಮುಖ್ಯವಲ್ಲ. ಭಾರತದಲ್ಲಿ ಎಲ್ಲರೂ ಇದನ್ನು ಅರ್ಥಮಾಡಿಕೊಳುತ್ತಾರೆಂದು ನಾನು ಆಶಿಸುತ್ತೇನೆ. ಭಾಷೆ ಅಥವಾ ಮತ್ತಾವುದೇ ವಿಷಯದ ಬಗ್ಗೆ ನನಗೆ ಆಸಕ್ತಿಯಿಲ್ಲ. ಗೋವಾದವರಿಗೆ ಮೈಸೂರು ಸರ್ಕಾರದಿಂದ ಏನೇ ಸಹಾಯ ಬೇಕಾದರೂ ನಾವು ಮಾಡಲು ಸಿದ್ಧರಿದ್ದೇವೆ. ಆದರೆ ಯಾವುದೇ ಸ್ವಾರ್ಥ ಸಾಧನೆಯ ದೃಷ್ಟಿಯಿಂದಲ್ಲ, ನಮ್ಮ ಅಭಿಲಾಷೆ ಎಂದರೆ, ಗೋವಾದ ಜನರು ಅಭಿವೃದ್ಧಿ ಹೊಂದಿ ಪ್ರಜಾಪ್ರಭುತ್ವ ಆಳ್ವಿಕೆಯಲ್ಲಿ ತೃಪ್ತರಾಗಿದ್ದೇವೆಂದು ಭಾವನೆ ಅವರಲ್ಲಿ ಮೂಡಬೇಕು. ಇದು ಮೈಸೂರು ಸರ್ಕಾರದ ಗುರಿ ಮತ್ತು ಚಿಂತನೆ.

**************

**********

ಸರ್ಕಾರಿ ಮುದ್ರಣಾಲಯ, ಬೆಂಗಳೂರು - 560 001